ಹಂಪಿ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ



# "ಕರ್ನಾಟಕದ ಕುಂಚಿಟಿಗರ ಮದುವೆಯ ಆಚರಣೆಗಳು" - ಒಂದು ಅಧ್ಯಯನ


ಮಾರ್ಗದರ್ಶಕರು

ಡಾ// ಕೆ. ರಮಾನಂದ

ಮುಖ್ಯಸ್ಥರು, ಕನ್ನಡ ವಿಭಾಗ

ಸಿಂಧಿ ಕಾಲೇಜು, ಬೆಂಗಳೂರು-560024.

ಸಂಶೋಧನಾ ವಿದ್ಯಾರ್ಥಿ

ರಂಗಶಾಮಯ್ಯ.ಕೆ.ಆರ್



ವರ್ಷ ೨೦೧೨-೧೩







ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ

ನರಸಿಂಹರಾಜ ಕಾಲೋನಿ, ಬೆಂಗಳೂರು-560019.

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನಾ ಕೇಂದ್ರ)

1043

ಹಂಪಿ ವಿಶ್ವ ವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ



# "ಕರ್ನಾಟಕದ ಕುಂಚಿಟಿಗರ ಮದುವೆಯ ಆಚರಣೆಗಳು" - ಒಂದು ಅಧ್ಯಯನ

ಮಾರ್ಗದರ್ಶಕರು

ಡಾ// ಕೆ. ರಮಾನಂದ

ಮುಖ್ಯಸ್ಥರು, ಕನ್ನಡ ವಿಭಾಗ

ಸಿಂಧಿ ಕಾಲೇಜು, ಬೆಂಗಳೂರು-560024.

ಸಂಶೋಧನಾ ವಿದ್ಯಾರ್ಥಿ

ರಂಗಶಾಮಯ್ಯ.ಕೆ.ಆರ್

ವರ್ಷ ೨೦೧೨-೧೩



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ

ನರಸಿಂಹರಾಜ ಕಾಲೋನಿ, ಬೆಂಗಳೂರು-560019.

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿರುವ ಸ್ನಾತಕೋತ್ತರ ಸಂಶೋಧನಾ ಕೇಂದ್ರ)

## ಮಾರ್ಗದರ್ಶಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪರಿಷ್ಠಾನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ ಬೆಂಗಳೂರು, ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೨-೧೩ನೇ ಸಾಲಿನ ಎಂ.ಫಿಲ್ ಪದವಿಗಾಗಿ ''ಕರ್ನಾಟಕದ ಕುಂಚಿಟಿಗರ ಮದುವೆಯ ಆಚರಣೆಗಳು - ಒಂದು ಅಧ್ಯಯನ'' ಎಂಬ ಶೀರ್ಷಿಕೆಯ ಈ ನಿಬಂಧವನ್ನು ರಂಗಶಾಮಯ್ಯ.ಕೆ.ಆರ್. ಎಂಬುವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದಾರೆ.

ಈ ನಿಬಂಧವು ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಕೆ. ರಮಾನಂದ

ಮಾರ್ಗದರ್ಶಕರು

ಸ್ಥಳಃ ಬೆಂಗಳೂರು

ದಿನಾಂಕಃ 25/07/13

ಡಾ// ಕೆ. ರಮಾನಂದ

**ಡಾ|| ಕೆ. ರಮಾನಂದ**
**ಎಂ.ಎ., ಎಂ.ಫಿಲ್., ಪಿಹೆಚ್.ಡಿ.**
**ಪ್ರೊಫೆಸರ್ ಮತ್ತು ಕನ್ನಡ ವಿಭಾಗದ ಮುಖ್ಯಸ್ಥರು**
**ಸಿಂಧಿ ಕಾಲೇಜು, ಹೆಬ್ಬಾಳ, ಬೆಂಗಳೂರು-24**

## ಅಭ್ಯರ್ಥಿಯ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪರಿಷ್ಠಾನ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನಾ ಕೇಂದ್ರ ಬೆಂಗಳೂರು, ಇವರ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೨-೧೩ನೇ ಸಾಲಿನ ಎಂ.ಫಿಲ್ ಪದವಿಗಾಗಿ "ಕರ್ನಾಟಕದಕುಂಚಿಟಿಗರ ಮದುವೆಯ ಆಚರಣೆಗಳು - ಒಂದು ಅಧ್ಯಯನ" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಡಾ//ಕೆ.ರಮಾನಂದ ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಸಲ್ಲಿಸುತ್ತಿದ್ದೇನೆ.

ಈ ನಿಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೆಂಗಳೂರು

ದಿನಾಂಕ: 25/07/13

ಸಂಶೋಧನಾ ವಿದ್ಯಾರ್ಥಿ

ರಂಗಶಾಮಯ್ಯ. ಕೆ.ಆರ್

# <u>ಪರಿವಿಡಿ</u>

## ವಿಷಯ

# ಅಧ್ಯಾಯ -1

## ಪೀಠಿಕೆ

"ಇತಿಹಾಸಕ್ಕೊಂದು ಚರಿತ್ರೆ ಇರುವಂತೆ ಜನಾಂಗಕ್ಕೂ ಒಂದು ನಿರ್ಧಿಷ್ಟ ಚರಿತ್ರೆ ಇರುತ್ತದೆ"- ವೋಲ್ಟೈರ್ ಎಂಬ ಫ್ರೆಂಚ್ ರಾಜ ನೀತಿಜ್ಞ, ತತ್ವಜ್ಞಾನಿ ಹೇಳುವಂತೆ "ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಪ್ರಚಲಿತವಾಗಿದೆ. ಆದರೆ ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಮಾತ್ರವಲ್ಲ, ಅಲ್ಲಿ ಬದುಕಿದ ಜನರೂ ಆಗಿದ್ದಾರೆ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ದೇಶದ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನ ಸಮಸ್ಯೆಗಳು ಮತ್ತು ಅವರ ಜೀವನ ಮೌಲ್ಯಗಳು".[1]

- ವೋಲ್ಟೈರ್

ಪ್ರಾಣಿ ಜೀವನದಿಂದ ಮನುಷ್ಯ ಜೀವನಕ್ಕೆ ವಿಕಸನಗೊಂಡ ಮಾನವ ನೂರಾರು ಜನಾಂಗ ಧರ್ಮ, ಸಂಸ್ಕೃತಿಗಳನ್ನು ಸೃಷ್ಠಿಸಿ ಬೆಳೆಸಿ ಪೋಷಿಸಿಕೊಂಡು ಬಂದನು. ಇವುಗಳ ಹಿನ್ನಲೆಯನ್ನು ತಿಳಿಯಲು ಜನಾಂಗೀಯ ಅಧ್ಯನವು ಅವಶ್ಯಕವೆಂದು ತಿಳಿದಾಗ ಅಧ್ಯನಕ್ಕೆ ತೊಡೆಗಿದನು. ಜನಾಂಗೀಯ ಅಧ್ಯಯನಗಳು ಒಂದು ಸೀಮಿತ ಶಾಸ್ತ್ರದವರು ಅಧ್ಯಯನಕ್ಕೆ ಒಳಗು ಮಾಡಿಕೊಂಡು ಅದರಿಂದ ಹೊರ ಬಂದ ಮಾಹಿತಿಗಳೇ ಅಂತಿಮ ಎನ್ನುವ ಕಾಲವೊಂದಿತ್ತು. ಆದರೆ ಇಂದು ಹೊಸ ಆಲೋಚನಾ ಕ್ರಮಗಳಿಂದ ನವೀನ ಶಾಸ್ತ್ರಗಳ ಹಿನ್ನೆಲೆಯಲ್ಲಿ ಹಳೆಯ ಅಧ್ಯಯನದ ಮನೋಭಾವ ಬದಲಾವಣೆಗೊಂಡಿದೆ. ಆದ್ದರಿಂದ ಇಂದು ಯಾವುದೇ ವಿಚಾರದ ಬಗೆಗೆ ಅಧ್ಯನಕ್ಕೆ ತೊಡಗಿದಾಗ ಅದು ತಲಸ್ಪರ್ಶಿಯಾದ ಅಧ್ಯಯನವಾಗಿರಬೇಕೆಂದು ವಿದ್ವಾಂಸರು ಆಶಿಸುತ್ತಾರೆ. ಹಾಗೆಯೇ ಅಧ್ಯಯನಗಳು ಅಂತರ ಶಾಸ್ತ್ರೀಯ ಅಧ್ಯಯನಕ್ಕೆ ಒತ್ತು ಕೊಡುತ್ತಾ, ಹಿಂದಿನ ಸಂಶೋಧನಾ ಮನೋಭಾವವನ್ನು ಇಂದಿನ ಸಂಶೋಧನಾಕಾರರಲ್ಲಿ ತೊಡೆದು ಹಾಕುತ್ತಾ, ಸತ್ಯವನ್ನು ತೋರಿಸಲು, ಗಟ್ಟಿತನದ ಹೊಳಪನ್ನು ಹೊರಹಾಕಲು ರಹದಾರಿಯನ್ನು ಸೃಷ್ಠಿಸಲಾಗಿದೆ. ಬಹುಶಃ ಇಂತಹ ಶಿಸ್ತು ಪಾಶ್ಚಾತ್ಯರಿಂದ ನೇರವಾಗಿ ನಮ್ಮಮೇಲೆ ಪ್ರಭಾವ ಬೀರಿದ್ದರು ಭಾರತದ ವಿಭಿನ್ನ ಜನಾಂಗಗಳ ವೈವಿಧ್ಯಮಯವಾದ ಸಂಸ್ಕೃತಿಗಳ ಅಧ್ಯಯನಕ್ಕೆ ಮತ್ತು ಅಂತರ್ ಶಾಸ್ತ್ರೀಯ ಅಧ್ಯಯನಕ್ಕೆ ಹೇಳಿ ಮಾಡಿಸಿ ಕೊಟ್ಟಂತಹ ಕ್ಷೇತ್ರವಾಗಿದೆ.

ಭಾರತದಲ್ಲಿ ಜಾತಿ ವ್ಯವಸ್ಥೆಯು ಪ್ರಾಚೀನ ಕಾಲದಿಂದಲೂ ಉಳಿದು ಬಂದಿರುವ ಪದ್ಧತಿ ಒಂದೊಂದು ಗ್ರಾಮ ಅಖಂಡವಾಗಿ ನಂತರ ಒಂದು ಸುಮುದಾಯವಾಗಿ ಕಾಣುವುದರ ಜೊತೆಗೆ ಅದರಲ್ಲಿ ವಿವಿಧ ಜಾತಿಗಳು ತಮ್ಮದೇ ಆದ ಪ್ರತ್ಯೇಕ ಜೀವನ ಪದ್ಧತಿಯನ್ನು ರೂಪಿಸಿಕೊಂಡು ಬಂದಿವೆ. ಹೀಗೆ ಜಾತಿಗಳು ಒಡೆದು ಬದುಕುವಾಗ ಸಮಾನ ಸಂಸ್ಕೃತಿಗಳನ್ನು ರೂಢಿಸಿಕೊಂಡಿರುವಂತೆ, ಪ್ರತಿಯೊಂದು ಜಾತಿಯು ತನ್ನದೇ ಆದ ಪದ್ಧತಿ ಆಚರಣೆಗಳನ್ನು ರೂಢಿಸಿಕೊಂಡು ಅನುಸರಿಸುತ್ತಾ ಬಂದಿದೆ. ಈ ಆಚರಣೆಗಳ ಹಿಂದೆ ಲೌಖಿಕ ಹಾಗೂ ಅಲೌಖಿಕ ಒತ್ತಡಗಳು ಕಾರ್ಯ ನಿರ್ವಹಿಸುತ್ತವೆಂಬುದು ಎಲ್ಲರಿಗೂ ತಿಳಿದ ವಿಷಯ. ಅಂತಹ ಆಚರಣೆಗಳ ಸತ್ಯಾ ಸತ್ಯತೆಯನ್ನು ಅರಿಯುವುದು ಮುಖ್ಯ ಉದ್ದೇಶವಾದಾಗ ಮಾತ್ರ ಪ್ರಾದೇಶಿಕ, ರಾಜಕೀಯ, ಅರ್ಥಿಕ ಸ್ಥಿತಿ ಗತಿಗಳನ್ನು ತಿಳಿಯಲು ಸಾಧ್ಯ. ಆದ್ದರಿಂದ ಇಂದು ಬಹುತೇಕ ಆಚರಣೆಗಳು ಸಂಸ್ಕೃತೀಕರಣಗೊಂಡು ಜನಪದ ಮೂಲವಾದ ಆಚರಣೆಗಳು ಸಂಸ್ಕೃತವನ್ನೋ ಅಥವಾ ಮೇಲ್ವರ್ಗದ ಜನರ ಪೂಜಾ ಪದ್ಧತಿಯನ್ನೋ ಅನುಸರಿಸುತ್ತಾ ಪರಿವರ್ತನೆ ಹೊಂದುತ್ತಿದೆ.

ಭಾರತದಂತಹ ರಾಷ್ಟ್ರವು ''ಜಾತಿ'' ವ್ಯವಸ್ಥೆಗೆ ಅಂಟಿಕೊಂಡಿರುವ ಮೈಲಿಗೆಯಿಂದಾಗಿ ''ಜಾತಿ'' ಪದವನ್ನು ಬಳಸಲು ಸಂಕೊಚ ಪಡುತ್ತಾ ''ಜನಾಂಗ'' ಪದ ಬಳಸುವುದು ಸೂಕ್ತವೆಂದು ಕಂಡುಬರುತ್ತದೆ. ಒಂದು ಜಾತಿಗೆ ಸೇರಿದ ಜನರನ್ನು ಒಂದು ಸಾಂಸ್ಕೃತಿಕ ಘಟಕವಾಗಿ ಪರಿಗಣಿಸಿ ''ಜನಾಂಗ'' ಎಂಬ ಪದವನ್ನು ಬಳಸಲಾಗಿದೆ.

ಅದರಂತೆ ಭಾರತದಲ್ಲಿ ಒಕ್ಕಲಿಗ ಜನಾಂಗದ ಒಳ ಪಂಗಡವಾದ ''ಕುಂಚಿಟಿಗ'' ಜನಾಂಗದ ಜನರು ಭಾರತ ಹಾಗೂ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಇಂದು ವಾಸಿಸುತ್ತಿದ್ದು, ಇಂದಿಗೂ ಈ ಜನಾಂಗವು ತಾವು ಅನುಸರಿಸಿಕೊಂಡು ಬಂದ ಸಂಪ್ರದಾಯ ಆಚರಣೆಗಳು ಬಹು ಮುಖ್ಯವಾದ ಸಂಗತಿಗಳಾಗಿವೆ. ಈ ರೀತಿಯ ಆಚರಣೆಗಳಲ್ಲಿ ವಿವಾಹಕ್ಕೆ ಸಂಬಂಧಪಟ್ಟ ಆಚರಣೆಗಳು ಪ್ರಮುಖವಾಗಿದ್ದು ಅವುಗಳನ್ನು ಮುಂದಿನ ಜನಾಂಗಕ್ಕೆ ತಿಳಿಸಲು ಹಾಗೂ ಆಚರಣೆಗಳ ಹಿಂದಿರುವ ವಿಶಿಷ್ಟ ನಂಬಿಕೆ ಮತ್ತು ಕಾರಣಗಳನ್ನು ತಿಳಿಯುವ ಉದ್ದೇಶದಿಂದ ಈ ಅಧ್ಯಯನವು ಪ್ರಮುಖ ಪಾತ್ರವಹಿಸುತ್ತದೆಯಾದ್ದರಿಂದ ಪ್ರಸ್ತುತ ಪ್ರಬಂಧಕ್ಕೆ ''ಕರ್ನಾಟಕದ ಕುಂಚಿಟಿಗರ ಮದುವೆಯ ಆಚರಣೆಗಳು'' ಒಂದು ಅಧ್ಯಯನವೆಂಬ ಶೀರ್ಷಿಕೆಯನ್ನು ಕೊಡಲಾಗಿದೆ.

---

1. ''ಫ್ರೆಂಚ್ ತತ್ವಜ್ಞಾನಿ ರಾಜನೀತಿಜ್ಞ ವೋಲ್ಟರ್ ಹೇಳುವಂತೆ.......''

''ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ'' ಲೇಖಕರು ಎಂ.ಎಚ್. ನಾಗರಾಜು .....ಪು.ಸಂ.29

# ಅಧ್ಯಾಯ - 2

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಅಧ್ಯಯನದ ಉದ್ದೇಶ :-**

ಭಾರತದ ಸಾವಿರಾರು ಜಾತಿಗಳಲ್ಲಿ ಒಂದಾಗಿರುವ "ಒಕ್ಕಲಿಗ ಜಾತಿಯು" ಒಂದು ಪ್ರಬಲ ಜಾತಿ. ಈ ಒಕ್ಕಲಿಗ ಜಾತಿಯ ಒಂದು ಪ್ರಬಲ ಒಳಪಂಗಡವಾದ ಕುಂಚಿಟಿಗ ಜನಾಂಗದ ಸಾಂಸ್ಕೃತಿಕ ಇತಿಹಾಸವನ್ನು, ವೈಶಿಷ್ಟ್ಯವನ್ನು, ಅನನ್ಯತೆಯನ್ನು ಒಂದೆಡೆ ಸಂಕಲಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಹಾಗೆಯೇ ಈ ಜನಾಂಗವು ರೂಢಿಸಿಕೊಂಡು ಬಂದಿರುವ ಆಚರಣೆ, ಸಂಸ್ಕೃತಿ, ಕೊಡುಗೆಗಳನ್ನು ಬರವಣಿಗೆಯಲ್ಲಿ ದಾಖಲಿಸುವುದು ಪ್ರಮುಖ ಉದ್ದೇಶವಾಗಿದೆ. ಇದರಿಂದ ಈ ಜನಾಂಗದ ಇತಿಹಾಸ ಲಭ್ಯವಾಗಿ ಈ ಜನಾಂಗದಲ್ಲಿ ಹುಟ್ಟಿದ ಪ್ರತಿಯೊಬ್ಬನಲ್ಲೂ ಸ್ವಾಭಿಮಾನ, ಗೌರವ ಮೂಡಲು ಸಾಧ್ಯವಾಗುತ್ತದೆ. ಹಾಗೂ ಇತರ ಜನಾಂಗದವರಿಗೆ ಈ ಜನಾಂಗದ ಪರಿಚಯವಾಗಿ ಅವರಲ್ಲೂ ಗೌರವ ಮೂಡಲು ಸಾಧ್ಯವಾಗುತ್ತದೆ ಎಂಬ ಸದುದ್ದೇಶದಿಂದ ಈ ಅಧ್ಯಯನವು ಅವಶ್ಯಕವಾಗಿದೆ.

ಈಗಾಗಲೇ ಭಾರತದಲ್ಲಿನ ಸಮುದಾಯಗಳ ವಿಶಿಷ್ಟ ಸಾಂಸ್ಕೃತಿಕ ಪರಂಪರೆಗಳು ಆಯಾ ಜನಾಂಗದಲ್ಲಿ ಅಪ್ರಜ್ಞಾ ಪೂರ್ವಕ ಸ್ಥಿತಿಯಲ್ಲಿ ಸುರಕ್ಷಿತವಾಗಿ ಪ್ರವಹಿತವಾಗಿದೆ. ಈ ಪರಂಪರೆಯ ಯಾವುದೇ ಒಂದು ಅಂಗ ಊನವಾದರೂ ಸಹಿಸುವುದಿಲ್ಲ. ಅದನ್ನು ಕಾಯ್ದುಕೊಳ್ಳಲು ಉತ್ಸುಕ ಜನಸಮುದಾಯ ಅತಿ ಮುತುವರ್ಜಿಯಿಂದ ಸರಿಪಡಿಸಲು ಪ್ರಯತ್ನಿಸುತ್ತದೆ. ಆದ್ದರಿಂದಲೇ ಸಮುದಾಯಗಳಲ್ಲಿರುವ ಸಾಂಸ್ಕೃತಿಕ ಆಚರಣೆಗಳು ಇಂದಿನ ನಾಗರೀಕ ವಿಧ್ಯಮಾನಗಳ ಮಾಧ್ಯಮದಲ್ಲಿಯೂ ಹೆಚ್ಚಿನ ವ್ಯತ್ಯಾಸವಾಗದೇ ಹಾಗೆಯೇ ಜೀವಂತವಾಗಿ ಉಳಿಸಿಕೊಂಡು ಬಂದಿರುವುದನ್ನು ಕಾಣಬಹುದು.

ಜನಾಂಗಿಕ ಅಧ್ಯಯನಗಳು ಒಂದು ನಿರ್ಧಿಷ್ಟ ಶಾಸ್ತ್ರದವರು ಅಧ್ಯಯನ ಮಾಡಿ ಅದರಿಂದ ಹೊರಬಂದ ಮಾಹಿತಿಗಳೇ ಅಂತಿಮ ಎಂದು ನಂಬಲಾಗಿತ್ತು. ಅದರೆ ಇಂದಿನ ಹೊಸ ಆಲೋಚನಾಕ್ರಮದಿಂದ ಹಳೆಯ ಪದ್ಧತಿಯನ್ನು ಬಿಟ್ಟು ನವೀನ ಶಿಸ್ತುಗಳನ್ನು ಅಳವಡಿಸಿಕೊಂಡು ತಲಸ್ಪರ್ಶಿಯಾದ ಅಧ್ಯಯನವಾಗಬೇಕೆಂಬುದು ವಿದ್ವಾಂಸರ ಅಭಿಪ್ರಾಯ. ಸತ್ಯಯವನ್ನು ಶೋಧಿಸಲು, ಜೊಳ್ಳನ್ನು ತೂರಿ ಗಟ್ಟಿತನದ ಹೊಳಹನ್ನು ತೋರಿಸಲು

ಹೊಸತಲೆಮಾರಿನ ಅಧ್ಯಯನದ ವಿಧಾನವು ದಾರಿ ಮಾಡಿಕೊಟ್ಟಿದೆ. ಈ ರೀತಿಯ ಶಿಸ್ತನ್ನು ನಾವು ಪಾಶ್ಚಾತ್ಯರಿಂದ ಪಡೆದುಕೊಂಡಿದ್ದರೂ, ಭಾರತದ ವಿಭಿನ್ನ ಜನಾಂಗಗಳ ವೈವಿಧ್ಯಮಯವಾದ ಸಂಸ್ಕೃತಿಗಳ ಅಭ್ಯಾಸಕ್ಕೆ ಮತ್ತು ಅಂತಶಿಸ್ತೀಯ ಅಧ್ಯಯನಕ್ಕೆ ಹೇಳಿ ಮಾಡಿಸಿದ ಕ್ಷೇತ್ರವಾಗಿದೆ.

ಪ್ರಾಚೀನ ಕಾಲದಿಂದಲೂ ಮಾನವ ಒಂದಲ್ಲಾ ಒಂದು ರೀತಿಯ ನಂಬಿಕೆ, ಆಚರಣೆ ಸಂಪ್ರದಾಯಗಳ ಮೂಲಕ ಸಂಸ್ಕೃತಿಯನ್ನು ರೂಢಿಸಿಕೊಂಡು ಬಂದು, ಒಂದು ವಿಶಿಷ್ಟವಾದ ಸಾಮಾಜಿಕ ವ್ಯವಸ್ಥೆಯನ್ನು ಕಟ್ಟಿಕೊಂಡಿದ್ದಾನೆ. ಒಂದು ಸಮುದಾಯವು ಇನ್ನೊಂದು ಸಮುದಾಯದಿಂದ ಪ್ರತ್ಯೇಕವಾಗಿದ್ದು ತಮ್ಮದೇ ಆದ ಗುಣ ಲಕ್ಷಣಗಳನ್ನು ಹೊಂದಿದೆ. ಇಂತಹ ಸಾಂಸ್ಕೃತಿಕ ವೈಶಿಷ್ಟತೆಗಳನ್ನು ಚಾಚೂ ತಪ್ಪದೆ ತಲೆಮಾರಿನಿಂದ ತಲೆ ಮಾರಿಗೆ, ಯಾವುದೇ ಆಧುನಿಕ ವಿದ್ಯಮಾನಕ್ಕೆ ಒಳಗಾಗದೇ ತನ್ನ ಜಿಗುಟುತನದ ಗುಣದಿಂದ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ಕಾಪಾಡಿಕೊಂಡು ಉಳಿಸಿಕೊಂಡು ಬಂದಿದೆ. ಹಾಗೆಯೇ ನಮ್ಮ ದೇಶದಲ್ಲಿ ಚಾರಿತ್ರಿಕ ಹಿನ್ನೆಲೆಯಿಂದಾಗಿ ಸಮುದಾಯದವರ ಸಾಂಸ್ಕೃತಿಕ ಬದುಕಿನಲ್ಲಿ ವೈಧಿಕ ಮತ್ತು ವೈಧಿಕೇತರ ಪರಂಪರೆಗಳ ವಿಚಿತ್ರವಾದ ಸಮ್ಮಿಳಿತವನ್ನು ಕಾಣುತ್ತೇವೆ. ಈ ಜನರು ಆಚರಿಸುವ ವಿವಾಹದ ಆಚರಣೆಗಳಲ್ಲಿ ಎಷೋ ಸಾಂಸ್ಕೃತಿಕ ವಿಚಾರಗಳು ಸೇರ್ಪಡೆಯಾಗಿರುವ, ಪೌರಾಣಿಕ, ಐತಿಹಾಸಿಕ ನಂಬಿಕೆಗಳು, ಶುದ್ಧ ದೇಸೀಯವಾದ ಜನಪದ ನಂಬಿಕೆಗಳ ನೆಲೆಗಳನ್ನು ಆಧರಿಸಿದ ವಿವರಗಳು ಇದಕ್ಕೆ ಸ್ಪಷ್ಟ ನಿದರ್ಶನಗಳಾಗಿವೆ.

ಆಚರಣೆಗಳು ಯಾವತ್ತು ಇದ್ದಕ್ಕಿದಂತೆ ಹುಟ್ಟಿ ನಶಿಸುವುದಿಲ್ಲ. ಇವು ತನ್ನದೇ ಆದ ಅರ್ಥ ಹಾಗೂ ಪರಂಪರೆಗಳನ್ನು ಹೊಂದಿರುತ್ತವೆ. ಬಹು ಪಾಲು ಆಚರಣೆಗಳು ಸಾಂಸ್ಕೃತಿಕ ವೈವಿಧ್ಯತೆಯ ನೈಜತೆಯನ್ನು ಒಳಗೊಂಡು ಧೀರ್ಘ ಕಾಲಿನವಾಗಿ ರೂಢಿಯಲ್ಲಿರುತ್ತವೆ. ಕೆಲವೊಮ್ಮೆ ಕಾಲಾಂತರದಲ್ಲಿ ರೂಪಾಂತರಗಳನ್ನು ಪಡೆಯಬಹುದು. ಇವುಗಳ ಹಿಂದೆ ಲೌಖಿಕ ಮತ್ತು ಅಲೌಖಿಕ ಒತ್ತಡಗಳು ಕಾರ್ಯ ನಿರ್ವಹಿಸುತ್ತವೆ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಇಂತಹ ಆಚರಣೆಗಳ ಸತ್ಯಾಸತ್ಯತೆಯನ್ನು ಅರಿತಾಗ ಮಾತ್ರ ಪ್ರಾದೇಶಿಕತೆ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಜೀವನದ ಸ್ಥಿತಿಗತಿಗಳನ್ನು ತಿಳಿಯಲು ಸಾಧ್ಯ. ಈ ಆಚರಣೆಗಳು ಯಾವುದೇ ಒಂದು ಸಮುದಾಯದ ಮೌಖಿಕ ಪಠ್ಯದ ಹಾಡು, ಕತೆಗಳು ಮಾತ್ರವಿರದೆ, ನೃತ್ಯ, ವಾದ್ಯದ ಸದ್ದು, ಸಮುದಾಯದ ಉತ್ಸಾಹ, ಮೌನ, ಪೂಜೆ ಮುಂತಾದ ಕ್ರಿಯಾತ್ಮಕ ಅಂಶಗಳು ಇರುತ್ತವೆ. ಇಂದು ಬಹುತೇಕ ಆಚರಣೆಗಳು ಸಂಸ್ಕೃತೀಕರಣಗೊಳ್ಳುತ್ತಿವೆ. ಅಂದರೆ ಮೇಲ್ವರ್ಗದ ಸಂಸ್ಕೃತಕ್ಕೋ ಅಥವಾ ಕೆಳವರ್ಗದ ಪೂಜಾ ವಿಧಾನಕ್ಕೊ ಒಳಗಾಗಿ ಪರಿವರ್ತನೆ ಹೊಂದುತ್ತಿವೆ. ಇದನ್ನು 'ಸಂಸ್ಕೃತೀಕರಣ' ಎನ್ನುವುದಕ್ಕಿಂತ ಒಂದು ಸಮುದಾಯದ ಮೇಲೆ ಮತ್ತೊಂದು ಪ್ರತಿಷ್ಠಿತ (ಡಾಮಿನೆಂಟ್) ಸಮುದಾಯವು ಅಪ್ರಜ್ಞಾಪೂರ್ವಕವಾಗಿ,

ಗುಪ್ತವಾಗಿ, ಬಲವಂತವಾಗಿ ನಡೆಸುವ ದಾಳಿಯಾಗಿರುತ್ತದೆ. ಪ್ರತಿಯೊಂದು ಆಚರಣೆಗಳು ಬಹು ಮುಖೀ ಸಂವೇದನೆಯಿಂದ ರೂಪಗೊಂಡಿರುತ್ತವೆ. ಇಲ್ಲಿ ಅನೇಕ ಕಾಲಘಟ್ಟಗಳು, ಅಸಂಖ್ಯಾತ ಅನುಭವಗಳು ಒಟ್ಟಿಗೆ ಕಾರ್ಯ ನಿರ್ವಹಿಸುವುದರಿಂದ ನಂಬಿಕೆ, ಆಚರಣೆಗಳು, ಸಂಪ್ರದಾಯಗಳು ಸಂಸ್ಕೃತಯುತವಾದ ಸಂಸ್ಕೃತಿಯ ಹುಟ್ಟಿಗೆ ಕಾರಣವಾಗುತ್ತವೆ.

### ಅಧ್ಯಯನದ ವ್ಯಾಪ್ತಿ:

ಈಗಾಗಲೇ ನಮಗೆ ತಿಳಿದಿರುವಂತೆ ದಕ್ಷಿಣ ಭಾರತದ ಕರ್ನಾಟಕ, ಅಂದ್ರ ಪ್ರದೇಶ ಮತ್ತು ತಮಿಳುನಾಡುಗಳಲ್ಲಿ ಕುಂಚಿಟಿಗ ಜನಾಂಗದವರು ವಾಸಿಸುತ್ತಿದ್ದಾರೆ. ಕೇರಳ, ಮಹಾರಾಷ್ಟ್ರದ ಕೆಲವು ಕಡೆ ವಾಸಿಸುತ್ತಿದ್ದಾರೆಂಬುದು ತಿಳಿದು ಬರುತ್ತದೆ. ಇತಿಹಾಸದ ಪ್ರಕಾರ ದಕ್ಷಿಣ ಭಾರತೀಯರೇ ಆಗಿರುವ ದ್ರಾವಿಡ ಮೂಲದ ಕುಂಚಿಟಿಗರಿಗೆ ಅವರದೇ ಅದ ಇತಿಹಾಸವಿದೆ. ಹಾಗೆಯೇ ವ್ಯವಸಾಯವನ್ನೇ ಕಸುಬಾಗಿ ಹೊಂದಿ, ಬಾಳಿಬದುಕಿದ ಸಾಧನೆಯ ಪರಂಪರೆ ಇದೆ. ಇವರ ಕೊಡುಗೆ, ಅನನ್ಯ ಹಾಗೂ ಅಮೋಘ ಇಂತಹವರ ಬದುಕಿನ ಮುಖ್ಯ ಆಚರಣೆಗಳಲ್ಲೊಂದಾದ ವಿವಾಹದ ಪದ್ಧತಿ, ರೂಢಿಗಳನ್ನು ಸಮುದಾಯದ, ಸಮಾಜದ ಮುಖ್ಯ ವಾಹಿನಿಗೆ ತರುವ ಕೆಲಸಗಳು ಈಗಾಗಲೇ ಸಾಕಷ್ಟು ನಡೆದಿದೆ. ಹಾಗೆಯೇ ಎಷ್ಟೊ ಜನಪದದ ಆಚರಣೆಗಳು ದಾಖಲೆಗಳಿಲ್ಲದೆ ನಶಿಸಿ ಮರೆಯಾಗುತ್ತಿವೆ. ಇತರೆ ಜನಾಂಗ ಮತ್ತು ಸಮುದಾಯಗಳ ಪ್ರಭಾವಕ್ಕೆ ಒಳಗಾಗಿ ಹೊಸ ವಿಷಯ, ಆಚರಣೆಗಳು ಸೇರ್ಪಡೆಗೊಂಡಿವೆ. ಹಾಗೆಯೇ ಎಷ್ಟೊ ಮಾಯವಾಗಿವೆ. ಈ ನಿಟ್ಟಿನಲ್ಲಿ ಪ್ರಸ್ತುತ ಇಂದು ಪ್ರಬಲ ಪಂಗಡವಾದ "ಕುಂಚಿಟಿಗ ಜನಾಂಗದ" ಹಲವು ಆಚರಣೆಗಳನ್ನು ಸಂಪ್ರದಾಯಗಳನ್ನು, ವಿಶೇಷವಾಗಿ "ಕರ್ನಾಟಕದ ಕುಂಚಿಟಿಗರ ಮದುವೆ"ಯ ಆಚರಣೆಗಳನ್ನು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿ, ಬೆಳಕಿಗೆ ತರುವ ಒಂದು ಸಣ್ಣ ಪ್ರಯತ್ನ ಈ ಪ್ರಬಂಧದ ಉದ್ದೇಶವಾಗಿದೆ.

# ಅಧ್ಯಾಯ - 3

## ಕುಂಚಿಟಿಗ ಪದದ ಹುಟ್ಟು ಮತ್ತು ಅರ್ಥ

ಒಕ್ಕಲಿಗ ಜಾತಿಯ ಪ್ರಬಲ ಒಳಪಂಗಡವಾದ "ಕುಂಚಿಟಿಗ" ಪದದ ಹುಟ್ಟು ಹೇಗಾಯಿತು? ಎಂಬುದಕ್ಕೆ ಹಲವಾರು ನಿದರ್ಶನಗಳನ್ನು ನೀಡಲಾಗಿದೆ. ಮುಖ್ಯವಾಗಿ ಈ ಕುಂಚಿಟಿಗರು ಯಾರು? ಈ ಹೆಸರು ಬರಲು ಕಾರಣವೇನು? ಈ ಪದವು ಹೇಗೆ ಹುಟ್ಟಿತು? ಇದರ ಅರ್ಥ ಏನು? ಎಂಬೆಲ್ಲ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯಲು ಇತಿಹಾಸಕಾರರು, ವಿಧ್ವಾಂಸರು ಬಹಳ ಶ್ರಮ ಪಟ್ಟಿದ್ದಾರೆ. ಈ ಮೇಲಿನ ಎಲ್ಲಾ ಪ್ರಶ್ನೆಗಳಿಗೂ ತಮ್ಮದೇ ಆದ ವಿಭಿನ್ನ ವಿವರಣೆಗಳನ್ನು ನೀಡಿದ್ದಾರೆ. ಅವುಗಳೆಂದರೆ:-

ಪ್ರೊ.ಎಂ. ಮರಿಯಪ್ಪ ಭಟ್ಟರು ಪರಿಷ್ಕರಿಸಿ ವಿಸ್ತರಿಸಿರುವ ಡಾ// ಫರ್ಡಿನೆಂಟ್ ಕಿಟ್ಟೆಲ್ ಅವರ ಕನ್ನಡ-ಇಂಗ್ಲೀಷ್ ಶಬ್ದಕೋಶದ ಎರಡನೆಯ ಸಂಪುಟದಲ್ಲಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟುಗಳಲ್ಲಿ ಈ ರೀತಿ ಹೇಳಿದ್ದಾರೆ. ಕುಂಚಿಗ, ಕುಂಚಟಿಗ, ಕುಂಚಡಿಗ, ಕುಂಚಿಟಿಗ, ಕುಂಚವಡಿಗ ಎಂಬ ಪದಗಳನ್ನು ಸಮಾನಾರ್ಥ ಪದಗಳಾಗಿ ಬಳಸಲಾಗಿದೆ. ಹಾಗೆ ಇವುಗಳಿಗೆ ವಿವಿಧ ಅರ್ಥಗಳನ್ನು ನೀಡಲಾಗಿದೆ.

1. ಕುಂಟಿಗ-ಕುಂಚಟಿಗ, ಶೂದ್ರ, ಒಕ್ಕಲಿಗರಲ್ಲಿ ಒಂದು ಒಳ ಪಂಗಡ
2. ಕುಂಚಟಿಗ- ತೊಗರಿಯನ್ನು ಬೇಳೆ ಮಾಡಿ ಮಾರುವವನು ಒಂದು ಜಾತಿಯ ಹೆಸರೂ ಕೂಡ
3. ಕುಂಚವಡಿಗ-ಕುಂಚವನ್ನು ಹಿಡಿಯುವವನು, ಚಾಮರ ಬೀಸುವ ಆಳು.[1]

ಇವುಗಳನ್ನು ಗಮನಿಸಿದಾಗ ಕುಂಚಿಗ, ಕುಂಚಿಟಿಗ ಎಂಬುವನು ಶೂದ್ರ ವರ್ಗಕ್ಕೆ ಸೇರಿದ ವ್ಯವಸಾಯವನ್ನೇ ತನ್ನ ಪ್ರಮುಖ ವೃತ್ತಿಯನ್ನಾಗಿ ಉಳ್ಳವ, ತೊಗರಿಯನ್ನು ಬೆಳೆದು ಬೇಳೆ ಮಾಡಿ ಮಾರಾಟ ಮಾಡುವ, ಕಂಬಳಿಯನ್ನು ನೇಯಲು ಕುಂಚವನ್ನು ಬಳಸುವವ ಅರಮನೆಗಳಲ್ಲಿ ಚಾಮರ ಬೀಸುವವನು ಎಂಬರ್ಥಗಳು ಸ್ಫುರಿಸುವುದು. ಅಂದರೆ ಒಕ್ಕಲು ತನ ಮೂಲದ, ರೈತರು, ಜೊತೆಗೆ ಕಂಬಳಿ ನೇಯ್ದು, ಮಾರುವ, ತೊಗರಿ ಬೇಳೆ ಮಾರುವ, ಚಾಮರ ಬೀಸುವವರು ಆಗಿದ್ದರೆಂದು ತಿಳಿದು ಬರುತ್ತದೆ. ಹಾಗಾಗಿ ಈ ಎರಡೂ ನಿಘಂಟುಗಳಲ್ಲಿ ಬರುವ ಕುಂಚ, ಕುಂಚಿಗ ಎಂಬ ಪದಗಳಿಂದ ಕುಂಚಿಗ, ಕುಂಚಿಟಿಗ ಪದಗಳು ಹುಟ್ಟಿರಬಹುದಾಗಿದೆ. ಹಾಗೆಯೇ

"ಕುಂಚ" ಎಂಬ ಪದಕ್ಕೆ "ಕುಚ್ಚು" ಗುಂಪು (a bunch) ಎಂಬ ಅರ್ಥಗಳೂ ಇವೆ. ಅಂದರೆ ಒಂದೇ ವೃತ್ತಿಯನ್ನವಲಂಬಿಸಿ, ಏಕ ಪ್ರಕಾರದ ಆಚಾರ ವಿಚಾರಗಳನ್ನು ಮೈಗೂಡಿಸಿಕೊಂಡು ಒಂದೇ ಪ್ರದೇಶದಲ್ಲಿ ಗುಂಪಾಗಿ ವಾಸಿಸುವುದರಿಂದ ಕುಂಚಿಟಿಗ ಪದವು ಹುಟ್ಟಿರಬಹುದಾಗಿದೆ. ಹಾಗೆಯೇ 'ಕುಂಚ' ಎಂಬ ಪದ ಚಿತ್ರ ಬರೆಯುವುದಕ್ಕೆ ಉಪಯೋಗಿಸುವ, ಬಣ್ಣ ಬಳಿಯುವುದಕ್ಕೂ, ಕಂಬಳಿನೇಯ್ಗೆಲ್ಲಿ ಬಳಸುವ 'ಬ್ರಶ್' ಪದವು ಕುರುಬ ಮೂಲದಿಂದ ಕುಂಚಿಟಿಗನಾದ ಎಂಬ ವಾದಕ್ಕೆ ಹತ್ತಿರವಾಗಿದೆ. ನೇಕಾರಿಕೆಯಲ್ಲಿ ಕುಂಚ ಎಂಬ ಉಪಕರಣ ಬಳಸುವುದರಿಂದ 'ಕುಂಚಿಟಿಗ' ಎಂಬ ಪದ ಹುಟ್ಟಿರಬಹುದು ಮತ್ತು 'ಕುಂಚಿ' ಎಂದರೆ ನವಿಲುಗರಿಯಿಂದ ಮಾಡಿದ 'ಕಿರೀಟ' ಅಥವಾ 'ಕುಲಾವಿ' ಎಂಬ ಮತ್ತೊಂದು ಅರ್ಥವೂ ಇದೆ ಎಂದಿದ್ದಾರೆ.

ಈ ಕುಂಚಿಟಿಗ ಎಂಬ ಪದವು ಮೇಲೆ ವಿವರಿಸಿದ ಯಾವ ಮೂಲದಿಂದಲಾದರೂ ಬಂದಿರಬಹುದು. ಕುಂಚ ಮತ್ತು ಅಡಿಗ ಎಂಬ ಎರಡು ಪದಗಳು ಸೇರಿ ಕುಂಚಡಿಗ ಆಗಿ, ನಂತರ ಕುಂಚಿಟಿಗ ಆಗಿರಬಹುದು ಎಂಬ ಅಭಿಪ್ರಾಯವಿದೆ. (ಕುಂಚ + ಅಡಿಗ = ಕುಂಚಡಿಗ- ಕುಂಚಿಟಿಗ)[2] ಕಿಟ್ಟೆಲ್ ಶಬ್ದಕೋಶದ ಪ್ರಕಾರ 'ಕುಂಚ' ಎಂದರೆ ಬ್ರಶ್, ಅಡಿಗ ಎಂದರೆ ಆಟಿಗ, ಆಣಿಗ-ಅಡಿಗ ಎಂಬುದಾಗಿದೆ. ಉದಾ ದೇವಾಡಿಗ, ಹೂವಾಡಿಗ, ಹಾವಾಡಿಗದಂತೆ ಕುಂಚ ಮತ್ತು ಅಡಿಗ ಸೇರಿ ಕುಂಚಡಿಗ-ಕುಂಚಟಿಗ ಎಂಬ ಪದೋತ್ಪತ್ತಿಯಾಗಿದೆ.

ತಮಿಳುನಾಡಿನ ಸೇಲಂ ಮ್ಯಾನ್ಯುಯಲ್‌ನಲ್ಲಿ ಕುಂಚಿ ಎಂಬ ಶಬ್ದಕ್ಕೆ ಧಾನ್ಯವನ್ನು ಅಳೆಯುವ ಸಾಧನವೆಂದು ಹೇಳಲಾಗಿದೆ. ಮೂಲತಹ ವ್ಯವಸಾಯಗಾರರಾದ್ದರಿಂದ ದಾನ್ಯಗಳನ್ನು ಅಳೆಯಲು ಕುಂಚಿಯನ್ನು ಬಳಸುತ್ತಿದ್ದರಿಂದ ಕುಂಚಿಗರು ಎಂಬ ಹೆಸರು ಆ ಜನಾಂಗಕ್ಕೆ ಬಂದಿರಬಹುದು.

ಮರಾಠಿಯಲ್ಲಿ 'ಕಮತ' ಎಂದರೆ ಬೇಸಾಯ. ಆದ್ದರಿಂದ ಮಹಾರಾಷ್ಟ್ರದಲ್ಲಿ ಕುಂಚಿಟಿಗರನ್ನು 'ಕಾಮಾಟಿ' ಗಳೆಂದು ಕರೆಯುತ್ತಾರೆ. ಕಾಮಾಟಿ ಎಂದರೆ ರೈತರು, ಕೃಷಿ ಕಾರ್ಮಿಕರು ಎಂಬರ್ಥಗಳಿವೆ. ಹೀಗೆ ಕಾಮಾಟಿ, ಕಾಮಾಟಿ ಕುಂಚಿಟಿಗರು ಎಂಬ ಪದಗಳು ಹುಟ್ಟಿರಬಹುದೆಂಬ ಅಭಿಪ್ರಾಯ ಹಲವರದ್ದಾಗಿದೆ.[3]

ಸಿ.ಹಯವದನರಾವ್ ರವರು ಸಂಪಾದಿಸಿರುವ ಇಂಗ್ಲೀಷ್ ಭಾಷೆಯ "ಮೈಸೂರು ಗೆಜೆಟಿಯಾರ್" ಬಿಂಪರ್‌ನಲ್ಲಿ ಮತ್ತೊಂದು ವಿವರಣೆ ಇದೆ, ಕುರುಬ ಜನಾಂಗದಿಂದ ಸಿಡಿದು ವ್ಯವಸಾಯ ವೃತ್ತಿಯನ್ನು

ಅವಲಂಬಿಸಿದವರನ್ನು ಕುಂಚಿಟಿಗರು ಎಂಬ ವಿವರಣೆ ಇದೆ. ಕಂಬಳಿ ನೇಯ್ಗೆಯಲ್ಲಿ ಕುಂಚವನ್ನು ಬಳಸುತ್ತಿದ್ದವರು ಮುಂದೆ ವ್ಯವಸಾಯವನ್ನು ಮಾಡುವಾಗ ತಮ್ಮ ಪೂರ್ವಶ್ರಮಾದಲ್ಲಿ ಬಳಸುತ್ತಿದ್ದ ಕುಂಚ ಎಂಬ ವಸ್ತುವಿನ ಹೆಸರೇ ಕುಂಚಿಟಿಗನಾಗಲು ಕಾರಣ ಎಂದು ತಿಳಿಯಬಹುದಾಗಿದೆ. ಇದನ್ನು ಹಲವು ವಿದ್ವಾಂಸರೂ ಪುರಸ್ಕರಿಸಿದ್ದಾರೆ.

ಒಟ್ಟಾರೆ ಕುಂಚಿಟಿಗ ಪದದ ಹುಟ್ಟು, ವಿಧಾನ, ಅರ್ಥಗಳ ಬಗ್ಗೆ ವಿವಿಧ ಮೂಲಗಳಿಂದ ಅನೇಕ ರೀತಿಯ ವಿವರಣೆಗಳು ದೊರೆತಿದ್ದರೂ ಇದೇ ಅಂತಿಮ ಎಂಬ ತೀರ್ಮಾನಕ್ಕೆ ಬರಲು ಸಾಧ್ಯವಿಲ್ಲ. ಇನ್ನು ವಿದ್ವಾಂಸರಲ್ಲಿ ಈ ಪದದ ಬಗ್ಗೆ ಬಿನ್ನಾಭಿಪ್ರಾಯಗಳಿರುವುದರಿಂದ ಇದರ ಸಂಶೋಧನೆ ಮತ್ತು ಅಧ್ಯಯನಗಳ ಅವಶ್ಯಕತೆ ಇದೆಯಂಬ ಸತ್ಯ ಸಂಗತಿಯಾಗಿದೆ.

---

1. ಡಾ// ಕಿಟ್ಟೆಲ್‌ರ ಕನ್ನಡ-ಇಂಗ್ಲೀಷ್ ನಿಘಟಿನ, 2ನೇ ಸಂಪುಟದಲ್ಲಿ ಪುಟ.459ರಲ್ಲಿ
2. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ - ಲೇಖಕರು ಎಂ.ಹೆಚ್.ನಾಗರಾಜು ಪು.ಸಂ.83
3. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ - ಲೇಖಕರು ಎಂ.ಹೆಚ್. ನಾಗರಾಜು ಪು.ಸಂ.83, 84

# ಅಧ್ಯಾಯ - 4

## ಕುಂಚಿಟಿಗ ಜನಾಂಗದ ಪ್ರಾಚೀನತೆ

ಕುಂಚಿಟಿಗ ಜನಾಂಗದ ಮೂಲವನ್ನು ಕುರಿತು ಚರ್ಚಿಸುವಾಗ ಅನೇಕ ಗೊಂದಲಗಳು ಸಮಸ್ಯೆಗಳು ಎದುರಾಗುತ್ತವೆ. ಈ ಕುಂಚಿಟಿಗರು ಆರ್ಯರೇ, ದ್ರಾವಿಡರೇ, ಇವರು ಉತ್ತರ ಭಾಗದಿಂದ ವಲಸೆ ಬಂದವರೇ? ಅಥವ ಸ್ಥಳೀಯರೇ? ಎಂಬ ವಾದಗಳ ಜೊತೆಗೆ ಕುಂಚಿಟಿಗರು ಎಂಬುದು ಒಂದು ಧರ್ಮವೇ, ಜನಾಂಗವೇ, ಮತವೇ ಎಂಬ ಪ್ರಶ್ನೆಗಳು ಎದುರಾಗುತ್ತವೆ.

ವಿಂಧ್ಯಪರ್ವತ ಮತ್ತು ನರ್ಮದಾ ನದಿಯ ದಕ್ಷಿಣಕ್ಕೆ, ಹಿಂದೂ ಮಹಾಸಾಗರದ ಉತ್ತರಕ್ಕೆ ಇರುವ ಭೂ ಪ್ರದೇಶವನ್ನು ದಕ್ಷಿಣ ಭಾರತ ಎಂದು ಗುರುತಿಸಲಾಗಿದೆ. ಇಲ್ಲಿ ಫಲವತ್ತಾದ ಢಖನ್ ಪ್ರಸ್ಥ ಭೂಮಿ ಇರುವುದರಿಂದ ಸಾವಿರಾರು ಜನಾಂಗಗಳು ನೆಲೆಸಿದ್ದು, ಅವರಲ್ಲಿ ಕುಂಚಿಟಿಗರು ಇದ್ದರೆಂದು ಹೇಳಲಾಗುತ್ತದೆ. ಕರ್ನಾಟಕ ಆಂದ್ರ, ತಮಿಳುನಾಡು, ಕೇರಳ ಮಹಾರಾಷ್ಟ್ರಗಳಲ್ಲೂ ನೆಲೆಸಿರುವ ಇವರು ಪ್ರಮುಖ ಕಸುಬಾಗಿ ವ್ಯವಸಾಯವನ್ನು ನಿರ್ವಹಿಸುತ್ತಿದ್ದರೆಂಬ ಉಲ್ಲೇಖವಿದೆ. ಅದ್ದರಿಂದ ಕುಂಚಿಟಿಗರ ಮೂಲವನ್ನು ಹುಡುಕ ಹೊರಟಾಗ ಪ್ರಮುಖವಾಗಿ ಎರಡು ವಾದಗಳನ್ನು ಗಮನಿಸಬಹುದು.

1. ಕುಂಚಿಟಿಗರು ಉತ್ತರ ಭಾರತದಿಂದ ವಲಸೆ ಬಂದವರೇ ಆಗಿದ್ದರೆ, ವೇದಕಾಲದ ಆರಂಭದಲ್ಲಿ ಅರ್ಯ ಮತ್ತು ದ್ರಾವಿಡರ ಸಂಘರ್ಷದ ಸಂದರ್ಭದಲ್ಲಿ ದಕ್ಷಿಣ ಭಾರತಕ್ಕೆ ವಲಸೆ ಬಂದವರು ಎಂಬ ವಾದ.
2. ಕುಂಚಿಟಿಗರು ವಲಸೆ ಬಂದವರಲ್ಲ ಅವರು ಸ್ಥಳೀಯರು ಎಂಬುದು -ಹಾಗಾಗಿ ಈ ಎರಡೂ ವಾದಗಳನ್ನು ತಳ್ಳಿಹಾಕುವಂತಿಲ್ಲ.[1]

ಆರ್ಯರ ಆಗಮನಕ್ಕೆ ಮೊದಲು ಭಾರತದಲ್ಲಿ ನಾಲ್ಕು ದಿಕ್ಕುಗಳಲ್ಲಿ ವಾಸಿಸುತ್ತಿದ್ದ ಜನರೆಲ್ಲಾ ದ್ರಾವಿಡರೇ ಆಗಿದ್ದರು. ಸಿಂಧೂ ಗಂಗಾ ನದಿಗಳ ಫಲವತ್ತಾದ ಭೂಮಿಯಲ್ಲಿ ಉನ್ನತ ಜೀವನಮಟ್ಟ ನಡೆಸುತ್ತಾ ಸಿಂಧೂ ನದಿಯ ನಾಗರೀಕತೆಗೆ ವಾರಸುದಾರರಾಗಿದ್ದರು. ಕ್ರಿ.ಪೂ. 2000 ವರ್ಷಗಳ ಸುಮಾರಿನಲ್ಲಿ ಬೀಕರ ಬರಗಾಲಕ್ಕೆ ತುತ್ತಾಗಿ ನೆಮ್ಮದಿಯ ತಾಣವನ್ನು ಹರಸುತ್ತಾ ಭಾರತಕ್ಕೆ ಬಂದರೆಂದು ತಿಳಿಯಬಹುದು. ಹೀಗೆ ಸುಮಾರು 4000 ವರ್ಷಗಳಿಂದ ನೆಲೆನಿಂತ ಕುಂಚಿಟಿಗರು ತಮ್ಮ ಉತ್ತರದ ಎಲ್ಲಾ ವೈಶಿಷ್ಟ್ಯತೆಗಳನ್ನು ಕಳೆದುಕೊಂಡು ಸಂಪೂರ್ಣವಾಗಿ ದಕ್ಷಿಣಭಾರತದ ದ್ರಾವಿಡರೆ ಅಗಿ ಪರಿವರ್ತನೆ ಹೊಂದಿದರೆಂದು ಕುಂಚಿಟಿಗರ ಬಗ್ಗೆ ಒಂದು ವಾದವಿದೆ.

ಹಾಗೆಯೇ ಕುಂಚಿಟಿಗರು ವಲಸೆ ಬಂದವರಲ್ಲ. ಅವರು ಸ್ಥಳೀಯರು ಕನ್ನಡಿಗರು ದೈಹಿಕ ಸ್ವರೂಪ ಅವರಾಡುವ ದ್ರಾವಿಡ ಮೂಲದ ಕನ್ನಡ, ಆಚಾರ ವಿಚಾರ, ಹಬ್ಬಹರಿದಿನ, ಉಡುಗೆ ತೊಡುಗೆಗಳಾವು ಉತ್ತರದವರಲ್ಲ. ಬದಲಾಗಿ ಅವು ದಕ್ಷಿಣ ಭಾರತದ ಲಕ್ಷಣಗಳಾಗಿವೆ. ಹಾಗಾಗಿ ಇತಿಹಾಸ ಪೂರ್ವದಿಂದಲೂ ಅವರು ದ್ರಾವಿಡಕುಲದ ದಕ್ಷಿಣ ಭಾರತಕ್ಕೆ ಸೇರಿದವರೆಂದು ತಿಳಿಯ ಬಹುದಾಗಿದೆ ಎಂಬ ಅಭಿಪ್ರಾಯ ವಿದೆ.

ಈ ಮೇಲ್ಕಂಡ ಎರಡು ವಾದಗಳಲ್ಲಿ ಯಾವುದನ್ನು ಗಮನಿಸಿದರೂ ಕುಂಚಿಟಿಗರ ಇತಿಹಾಸ, ಸಾಂಸ್ಕೃತಿಕ ಜೀವನ ಪರಂಪರೆಯು 5000 ವರ್ಷಗಳಷ್ಟು ದೀರ್ಘ ಕಾಲಕ್ಕೆ ತೆರೆದುಕೊಳ್ಳುತ್ತದೆ.

ದಂತಕತೆಗಳ ಪ್ರಕಾರ ಕುಂಚಿಟಿಗರು ಸಾಂಸ್ಕೃತಿಕ ವೀರರು, ವೀರವನಿತೆಯರು ಅವರ ಜನಾಂಗದ ಸಾಹಸ ಕತೆಗಳನ್ನು ತಿಳಿಸುವ ನೂರಾರು ದಂತಕತೆಗಳು, ಐತಿಹ್ಯಗಳು ಇತಿಹಾಸದ ಆಧಾರಗಳಾಗಿವೆ.

ಕುಂಚಿಟಿಗರ ಮೂಲ ಪುರುಷನಾದ ಉಂಡೆತ್ತರಾಯನು ರಾಜನ ಕಿರುಕುಳ ತಾಳಲಾರದೆ ವಲಸೆ ಹೊರಟು ದೆಹಲಿಯಿಂದ ಕರ್ನಾಟಕದ (ದಕ್ಷಿಣ ಭಾರತ) ಕಡೆ ತನ್ನ ಪರಿವಾರ ಸಮೇತ ಬರುವಾಗ ನದಿ ದಾಟಲು ಕಷ್ಟವಾದಾಗ ಅಲ್ಲಿ ಸಹಾಯ ಮಾಡಿದ ವ್ಯಕ್ತಿಗೆ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿ, ನಂತರ ಕಾಣಿಕೆಯಾಗಿ ತಾನು ಧರಿಸಿದ ಕುಂಚ, ಕುಲವಿ (ವಸ್ತು)ವನ್ನು ದಾನವಾಗಿ ಕೊಟ್ಟನೆಂದು ತಿಳಿದು ಬರುತ್ತದೆ.

ಹೀಗೆ 1149 ರ ಅನೆಗೊಂದಿ ಶಾಸನದಿಂದ ಆರಂಭಿಸಿ 20ನೇ ಶತಮಾನದವರೆಗೂ ಸಿಕ್ಕಿರುವ ಗ್ರಂಥಗಳು, ಶಾಸನಗಳು, ಸರ್ಕಾರಿ ದಾಖಲೆಗಳನ್ನು ಗಮನಿಸಿದಾಗ ಪ್ರಾಚೀನ ಕಾಲದಲ್ಲಿ ಈ ಜನಾಂಗವನ್ನು ಕುಂಚಿಗರು ಎಂದು ನಂತರ ಆಧುನಿಕ ಕಾಲದಲ್ಲಿ ಕುಂಚಿಟಿಗರು ಎಂದು ರೂಢಿಗತವಾಗಿ ಕರೆಯುತ್ತಿದ್ದಾರೆ. ಆದ್ದರಿಂದ ಸರಿ ಸುಮಾರು ಈ ನಾಡಿಗೆ 5000 ವರ್ಷಗಳ ಇತಿಹಾಸವಿರುವುದರಿಂದ ಆರಂಭದಿಂದಲೂ ಕುಂಚಿಟಿಗರು ಇಲ್ಲಿ ವಾಸಿಸುತ್ತಿರುವುದರಿಂದ ಈ ಜನಾಂಗಕ್ಕೂ ಅಷ್ಟೇ ವರ್ಷಗಳ ಇತಿಹಾಸ ಮತ್ತು ಸಾಂಸ್ಕೃತಿಕ ಚರಿತ್ರೆ ಇದೆ ಎಂದು ಹೇಳಬಹುದು.[2]

---

1. ಕು.ಸಾಂ. ಇತಿಹಾಸ - ಲೇ ಎಂ.ಎಚ್. ನಾಗರಾಜು ಪು.ಸಂ.79
2. ಕು.ಸಾಂ. ಇತಿಹಾಸ - ಲೇ ಎಂ.ಎಚ್. ನಾಗರಾಜು ಪು.ಸಂ.81

# ಅಧ್ಯಾಯ - 5

## ಭಾರತೀಯರಲ್ಲಿ ವಿವಾಹದ ಸ್ವರೂಪ ಮತ್ತು ಬಗೆಗಳು

ಭೂಮಿಯ ಮೇಲಿನ ಪ್ರತಿಯೊಂದು ಜೀವಿ ಸಂಕುಲದ ಕರ್ತವ್ಯಗಳಲ್ಲಿ ಸೃಷ್ಠಿಕ್ರಿಯೆಯು ಅತಿ ಮುಖ್ಯವಾದುದು. ಎಲ್ಲಾ ಪ್ರಾಣಿಗಳಲ್ಲಿಯೂ ಗಂಡು-ಹೆಣ್ಣುಗಳ ಸಮಾಗಮದ ಮೂಲಕ ತನ್ನಂತದೇ ಮತ್ತೊಂದು ಜೀವಿಗೆ ಜನ್ಮ ನೀಡುವುದು ಪ್ರಕೃತಿ ಬದ್ಧ ಹಾಗೂ ಸೃಷ್ಠಿ ಕ್ರಿಯೆ. ಈ ಕ್ರಿಯೆಯಿಂದಾಗಿಯೇ ಭೂಮಿಯ ಮೇಲಿನ ಜೀವರಾಶಿಗಳು ಅನಾದಿ ಕಾಲದಿಂದ ಬದುಕುಳಿಯಲು ಸಾಧ್ಯವಾಗಿರುವುದು. ಈ ಸಂಯೋಗ ಮತ್ತು ಸಂತಾನಾಭಿವೃದ್ಧಿ ಕ್ರಿಯೆಯನ್ನು ಯಾರೂ ಯಾವ ಪ್ರಾಣಿಗೂ ಕಲಿಸಿಕೊಟ್ಟಿಲ್ಲ. ಪ್ರಾಣಿ, ಪಶು ಪಕ್ಷಿಗಳಲ್ಲಿ ಯಾವುದೇ ರೀತಿಯ ನಿಯಮ ನಿಬಂಧನೆಗಳ ದಾಂಪತ್ಯ ಜೀವನ ವಿಧಾನ ಇಲ್ಲ. ಒಂದು ಸಾರಿ ಸಂಯೋಗಗೊಂಡ ಎರಡೂ ಪ್ರಾಣಿಗಳು ಮತ್ತೆ ಬೇರೆ ಬೇರೆ ಪ್ರಾಣಿಗಳ ಜೊತೆ ಸೇರಿ ಮೈಥುನ ಕ್ರಿಯೆಯನ್ನು ನಡೆಸುತ್ತವೆ. ತಾನೇ ಜನ್ಮ ನೀಡಿದ ಸಂತಾನದೊಂದಿಗೆ ಜನ್ಮದಾತ ಪ್ರಾಣಿಗಳೇ ಮೈಥುನ ಕ್ರಿಯೆಯಲ್ಲಿ ತೊಡಗುತ್ತವೆ. ಹಾಗೆಯೇ ತಾನೇ ಜನ್ಮಕೊಟ್ಟ ಕೂಸು (ಮರಿ) ಗಳನ್ನು ಪ್ರಾಪ್ತವಯಸ್ಸಿಗೆ ಬಂದ ತಕ್ಷಣ ದೂರಮಾಡುತ್ತವೆ. ಆದುದರಿಂದ ಪ್ರಾಣಿ ಪಕ್ಷಿಗಳಲ್ಲಿ ಯಾವ ವಿಧವಾದ ಕೌಟಂಬಿಕ ಭಾಂಧವ್ಯವೂ ಇರುವುದಿಲ್ಲ.

ಹಾಗೆಯೇ ಆಧಿಮಾನವನೂ ಕೂಡ ಈ ಪ್ರಾಣಿಗಳಂತೆ ಬೆಳೆದು ಬಂದಿದ್ದನ್ನು ಗಮನಿಸಬಹುದು. ಆದರೆ ಮುಂದೆ ಕಾಡಿನಿಂದ ನಾಡಿಗೆ ಬಂದ ಮಾನವನು ಜ್ಞಾನ ವಿಕಾಸವಾದಂತೆ ತನ್ನ ಪರಿಸರದಲ್ಲಿನ ತನ್ನದೇ ಆದ ಜನಾಂಗವನ್ನು ಕುರಿತು ಸಮಷ್ಠಿ ಭಾವನೆಗಳನ್ನು ತಳೆದನು. ತನ್ನದೇ ಆದ ಸಾಮಾಜಿಕ ಬದುಕನ್ನು ಕಟ್ಟಿಕೊಂಡ ಮೇಲೆ ಸೃಷ್ಠಿಕ್ರಿಯೆ ಮತ್ತು ಸಾಂಸಾರಿಕ ಬದುಕಿಗೆ ಕೆಲವೊಂದು ನೀತಿ ನಿಬಂದನೆಗಳನ್ನು ಆಚರಣೆಗೆ ತಂದನು. ಅದರ ಫಲವಾಗಿಯೇ ಮದುವೆಯಂತಹ ಆಚರಣೆಗಳು ಅಸ್ತಿತ್ವಕ್ಕೆ ಬಂದಿರಬಹುದು.

ಆದಿಮಾನವರು ಕೂಡ ಕಾಡು ಪ್ರಾಣಿಗಳಂತೆಯೇ ಗುಂಪಾಗಿ ವಾಸಿಸತೊಡಗಿದರು. ಮೈ ಮೇಲೆ ಬಟ್ಟೆತೊಡದಂತೆ ಸಂಚರಿಸಿದರು. ಕಾಡು ಪ್ರಾಣಿಗಳು ಅಕ್ರಮಣ ಮಾಡಿದಾಗ ಒಗ್ಗಟ್ಟಾಗಿ ಹೋರಾಡ ತೊಡಗಿದರು. ಆಗ ಮಾನವನಿಗೆ ಒಗ್ಗಟ್ಟಿನ ಅವಶ್ಯಕತೆ ಇದೆ ಎಂಬ ಅರಿವಾಯಿತು. ತನ್ನ ಗುಂಪಿನಲ್ಲಿ ಬಲಾಢ್ಯನಾದ ವ್ಯಕ್ತಿಯನ್ನು ಆರಿಸಿಕೊಂಡವು. ಕ್ರಮೇಣ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ತಮ್ಮ ಗುಂಪಿನ ಇತರರಿಗೆ ಬೇರೆ ಬೇರೆ ಜವಾಬ್ದಾರಿಗಳನ್ನು ನಿರ್ವಹಿಸಲು ನೇಮಿಸಿದರು. ಹೀಗೆ ಒಗ್ಗಟ್ಟಾದ ಗುಂಪುಗಳು ತಮ್ಮನ್ನು

ರಕ್ಷಿಸಿಕೊಳ್ಳುತ್ತಾ, ಅದೇ ಪ್ರಾಣಿಗಳನ್ನು ಬೇಟೆಯಾಡಿ ಹಸಿ ಮಾಂಸ ತಿನ್ನುತಿದ್ದನು. ನಂತರ ನಿಸರ್ಗದಲ್ಲಿ ದೊರೆಯುತ್ತಿದ್ದ ಹಣ್ಣು ಹಂಪಲು, ಕಾಯಿ ಪಲ್ಯೆ, ಗೆಡ್ಡೆಗಳು ದಾನ್ಯಗಳನ್ನು ತಿನ್ನತೊಡಗಿದನು. ಹಣ್ಣುಗಳು ಪಕ್ವವಾಗಿ ನೆಲದ ಮೇಲೆ ಬಿದ್ದು ಬೀಜಗಳು ಮೊಳಕೆಯೊಡೆದು ಬೆಳೆವುದನ್ನು ಕಂಡರು. ಅದನ್ನು ತನ್ನದೇ ಆದ ರೀತಿಯಲ್ಲಿ ಕೃಷಿ ಮಾಡತೊಡಗಿ ದವಸ, ಧಾನ್ಯ, ಮರಗಿಡ ಬೆಳೆಸಿ ಕೃಷಿ/ ವ್ಯವಸಾಯವನ್ನು ಕಲಿತನು. ಪ್ರಾಣಿಗಳಂತೆ ತಮಗೆ ಹುಟ್ಟಿದ ಮಕ್ಕಳನ್ನು ಹೊರ ಹಾಕದೆ ಜೊತೆಯಲ್ಲಿಟ್ಟುಕೊಂಡು ಕುಟುಂಬ ಜೀವನ ಪ್ರಾರಂಭಸಿದನು. ಆ ಕುಟುಂಬದ ಸದಸ್ಯರನ್ನು ವಂಶವೆಂದು ತಿಳಿದು ಬೇರೆ ಬೇರೆ ಕುಲ/ವಂಶಗಳು ಹುಟ್ಟಿಕೊಂಡವು. ಮುಂದೆ ತಮಗೆ ಬೇಕಾದ ವಸ್ತುಗಳ ಉಪ್ಪತ್ತಿಮಾಡುತ್ತ ಅವರನ್ನು ಬೇರೆ ಬೇರೆ ಕುಲದವರೆಂದು ಗುರುತಿಸುತ್ತಾ, ಮುಂದೆ ಅವೇ ಜಾತಿಗಳಾಗಿ ಪರಿವರ್ತನೆಯಾಗ ತೊಡಗಿದವು.

ಆದಿ ಮಾನವನ ಕಾಲದಲ್ಲಿ ವಿವಾಹ ಪದ್ಧತಿಯಾಗಲಿ, ದಾಂಪತ್ಯ ಜೀವನವಾಗಲೀ ಇರಲಿಲ್ಲ ತಮ್ಮ ಕಾಮದ ದಾಹವನ್ನು ತೀರಿಸಿಕೊಳ್ಳಲು ಗಂಡು ಹೆಣ್ಣುಗಳು ಪರಸ್ಪರ ರತಿಕ್ರೀಡೆಯಲ್ಲಿ ತೊಡಗುತ್ತಿದ್ದರು. ಮುಂದೆ ಹೆಣ್ಣಾಗಲಿ, ಗಂಡಾಗಲಿ ತಮಗೇ ಬೇಕಾದ ವ್ಯಕ್ತಿಗಳೊಂದಿಗೆ ಸಂಯೋಗದಲ್ಲಿ ತೊಡಗುತ್ತಿದ್ದರು. ಹೀಗಿರುವಾಗ ಗಂಡು ಹೆಣ್ಣುಗಳ ನಡುವೆ ಸಂಘರ್ಷಗಳು ಏರ್ಪಡತೊಡಗಿದವು. ನಂತರದ ದಿನಗಳಲ್ಲಿ ಸಂಘರ್ಷಗಳನ್ನು ತಪ್ಪಿಸಲು ಮದುವೆಯಂತಹ ಆಚರಣೆಗಳನ್ನು ಕಂಡುಕೊಂಡನು. ಆದರೆ ಈ ವಿವಾಹ ಪದ್ದತಿಗಳು ಯಾವುದೇ ವೇದ ಕಾಲದ ಶಾಸ್ತ್ರಗಳನ್ನಾಗಲಿ ಸಂಪ್ರದಾಯಗಳನ್ನಾಗಲಿ ಅನುಸರಿಸುತ್ತಿರಲ್ಲಿಲ್ಲ. ಏಕೆಂದರೆ ಆದಿ ಮಾನವನ ವಿವಾಹ ಪದ್ದತಿ ವೇದಕಾಲಕ್ಕಿಂತಲೂ ಪ್ರಾಚೀನವಾದದ್ದು. ಆದ್ದರಿಂದ ಒಂದು ಗಂಡನ್ನು ಹೆಣ್ಣು ಹಾಗೆ ಒಂದು ಹೆಣ್ಣನ್ನು ಗಂಡು ಸ್ವಂತಿಕೆಯಾಗಿ ಮಾಡಿಕೊಳ್ಳುವ ಒಂದು ಪದ್ಧತಿ ಮಾತ್ರವಷ್ಟೆ.

ಮುಂದೆ ಈ ರೀತಿ ಗಂಡು ಹೆಣ್ಣುಗಳು ಒಂದಾಗಿ ಪರಸ್ಪರ ಅರಿತುಕೊಂಡು ಕಷ್ಟ ಸುಖಗಳಲೂ ಭಾಗಿಯಾಗಿ ಕೂಡಿ ಬಾಳುವುದನ್ನು ದಾಂಪತ್ಯ ಜೀವನವೆಂದು ಕರೆಯಲ್ಪಟ್ಟಿತು. ಹೀಗೆ ಈ ಇಬ್ಬರೂ ಒಂದೆಡೆ ವಾಸಿಸುವುದನ್ನು ಕಲಿತು ತಮಗೆ ಬೇಕಾದ ವಸ್ತು ಪದಾರ್ಥಗಳನ್ನು ಶ್ರಮದಿಂದ ಸಂಗ್ರಹಿಸಿಕೊಂಡು ಕೊನೆವರೆಗೂ ಬಾಳುವುದನ್ನೇ ಮುಂದೆ ದಾಂಪತ್ಯ ಜೀವನವೆಂದು ಹೇಳಬಹುದು.

ಆದಿ ಮಾನವರ ಕಾಲದಲ್ಲಿ ಒಬ್ಬ ಗಂಡು ಅನೇಕ ಸ್ತ್ರೀಯರನ್ನು ಮದುವೆಯಾಗುವ ಸಂಪ್ರದಾಯವಿತ್ತು. ಅಷ್ಟು ಜನ ಹೆಣ್ಣುಗಳಿಗೆ ಈತ ಒಡೆಯನಾಗಿದ್ದು ಅವರನ್ನು ತನ್ನ ಕಾಮದಾಹ ತೀರಿಸಿಕೊಳ್ಳಲು ಬಳಸಿಕೊಳ್ಳುತ್ತಿದ್ದನು. ಒಟ್ಟು ಕುಟುಂಬದಲ್ಲಿ ಬದುಕುತ್ತಾ ಹೆಣ್ಣನ್ನು ಸಂಪತ್ತಿನ ಭಾಗವೆಂದು ತಿಳಿದು ಬಹು ಪತ್ನಿತ್ವ

ಪದ್ದತಿ ರೂಢಿಗೆ ಬಂದಿತು. ಉದಾಹರಣೆಗೆ ಮೂವರು ಮಡದಿಯರಿದ್ದದು. ಮಹಾಭಾರತದ ಕೃಷ್ಣನಿಗೆ-ರುಕ್ಮಿಣಿ, ಸತ್ಯಭಾಮ, ಹಾಗೆಯೇ ಹೈದರಾಬಾದಿನ ನಿಜಾಮ ಬಹು ಪತ್ನಿಯರವನ್ನು ಹೊಂದಿದ್ದದು ತಿಳಿದು ಬರುತ್ತದೆ. ಆಧುನಿಕ ಕಾಲದಲ್ಲಿ ಹಿಂದೂ ವಿವಾಹ ಕಾಯ್ದೆಯು ಜಾರಿಗೆ ಬರುವ ಮುಂಚೆ ಮತ್ತು ನಂತರವೂ ಈ ಬಹು ಪತ್ನಿತ್ವ ಪದ್ಧತಿ ರೂಢಿಯಲ್ಲಿರುವುದಕ್ಕೆ ಸಾಕಷ್ಟು ಉದಾಹರಣೆಗಳಿವೆ.

ಹಾಗೆಯೇ ಬಹು ಪತಿತ್ವ ಪದ್ದತಿಯೂ ರೂಢಿಯಲ್ಲಿದುದು ಮಹಾಭಾರತದಂತಹ ಕಾವ್ಯದಲ್ಲಿ ತಿಳಿಯುತ್ತದೆ. ದ್ರೌಪದಿಯು ಐವರು ಗಂಡಂದಿರನ್ನು ವರಿಸಿದ್ದನ್ನು ಕಾಣಬಹುದು. ಆದರೆ ಇಂದು ಇದನ್ನು ಅನುಚಿತವಲ್ಲವೆಂಬ ಕಾರಣದಿಂದ ಸಮಾಜವು ತಿರಸ್ಕರಿಸಿದೆ. ಕಾಲದೇಶ ಪರಿಸ್ಥಿತಿಗಳಿಗೆ ಅನುಗುಣವಾಗಿ ತಮಗೆ ಅನುಕೂಲವಾದ ಪದ್ಧತಿಗಳನ್ನು ಹಿಂದಿನವರು ರೂಢಿಸಿಕೊಂಡಿದ್ದರು. ಈಗಲೂ ಭಾರತದ ಗಡಿ ರಾಷ್ಟ್ರಗಳಲ್ಲಿ ಟಿಬೆಟ್ ದಕ್ಷಿಣ ಆಫ್ರಿಕಾ ಖಂಡಗಳಲ್ಲೂ ಬಹುಪತಿತ್ವ ಪದ್ಧತಿಯು ರೂಢಿಯಲ್ಲಿರುವುದು ನಮಗೆ ತಿಳಿಯುತ್ತದೆ.

ಹಿಂದೆ ಆದಿಮಾನವ ಪ್ರಾಣಿಗಳಂತೆಯೇ ಹೆಣ್ಣನ್ನು ತನ್ನ ಕಾಮದಾಹಕ್ಕಾಗಿ ಬಳಸಿ, ತಮಗೆ ಜನಿಸಿದ ಮಕ್ಕಳನ್ನು ಕುಟುಂಬದಿಂದ ಹೊರಹಾಕುತ್ತಿದ್ದನು. ಆದರೆ ಕಾಲಾಂತರದಲ್ಲಿ ಕುಟುಂಬ ಜೀವನವನ್ನು ಪ್ರಾರಂಭಿಸಿ ತಮಗೆ ಜನಿಸಿದ ಮಗುವನ್ನು ಜೊತೆಯಲ್ಲಿ ಇಟ್ಟುಕೊಂಡು ಜೀವಿಸ ತೊಡಗಿದರು. ಈ ಜೀವನ ವಿಧಾನವನ್ನು ಕುಟುಂಬ ಜೀವನವೆಂದು ಕರೆಯಲಾಯಿತು. ಕಾಲಕ್ರಮೇಣ ಈ ಕುಟುಂಬ ಜೀವನದಲ್ಲಿ ಕೆಲವು ವಂಶಗಳು ಉತ್ಥಾನಗೊಂಡವು. ಹೀಗೆ ಉತ್ಥಾನಗೊಂಡ ಕುಟುಂಬ ಅಥವಾ ವಂಶಗಳು ಒಂದು ಪ್ರದೇಶವನ್ನು ತಮ್ಮ ವಾಸದ ನೆಲೆ ಮಾಡಿ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಟ್ಟವು. ಈ ಪ್ರದೇಶದಲ್ಲಿ ಒಟ್ಟಾಗಿ ನೆಲೆಸಿದ್ದ ಜನರು ತಮಗೆಬೇಕಾದ ಮೂಲ ಸೌಕರ್ಯಗಳನ್ನು ರಸ್ತೆ, ನೀರು, ರಕ್ಷಣಾ ಪದ್ದತಿ ಉತ್ಪನ್ನ ಹಾಗೂ ಇತರೆ ಅಗತ್ಯ ವಸ್ತುಗಳನ್ನು ಸಂಗ್ರಹಿಸುವುದರ ಮೂಲಕ ಸಾಂಘಿಕ ಜೀವನವನ್ನು ಪ್ರಾರಂಭಿಸಿದನು.

ವಿವಾಹ ಮತ್ತು ಕುಟುಂಬಗಳು ಪರಸ್ಪರ ಪೂರಕವಾದ, ಸಾರ್ವತ್ರಿಕವಾದ ಸಾಮಾಜಿಕ ಸಂಸ್ಥೆಗಳಾದವು. ಮನೋಜೈವಿಕ ಆಧಾರದ ಮೇಲೆ ರೂಪಗೊಂಡ ಈ ಸಂಸ್ಥೆಗಳು ಸಾಮಾಜಿಕ ವ್ಯವಸ್ಥೆಯ ಕೇಂದ್ರ ಬಿಂದುಗಳಂತೆ. ಒಂದು ಕುಟುಂಬದಲ್ಲಿ ಕಂಡು ಬರುವ ಎಲ್ಲಾ ಸಂಬಂಧಗಳನ್ನು ನಿರ್ದೇಶಿಸುವುದು ಮದುವೆ. ಹಲವಾರು ವ್ಯಕ್ತಿಗಳನ್ನು ಒಂದು ಆರ್ಥಿಕ ನೆಲೆಯಲ್ಲಿ ನಿಲ್ಲಿಸಿ ಅವರ ಸುತ್ತಲೂ ಸಾಮಾಜಿಕವಾದ ಧಾರ್ಮಿಕ ಬಲೆಯನ್ನು ಹೆಣೆದು ಸಾಮಾಜಿಕವಾದ ನೆಲೆಗೆ ಸಂಯೋಜಿಸಿ ಅದರ ವೈಶಿಷ್ಟ್ಯವನ್ನು ಉಳಿಸಿ ಬೆಳೆಸುವುದು ಈ ಮದುವೆಯ ಕೆಲಸ ಸ್ತ್ರೀ ಪುರುಷ ಸಾಂಗತ್ಯದಿಂದಾದ ವಿವಾಹಕ್ಕೆ ಸಾಮಾಜಿಕ ಮಾನ್ಯತೆ ಅಗತ್ಯ ಹಾಗೂ ಕಾನೂನಿನ

ಬಡಂಬಡಿಕೆಯ ಸ್ವರೂಪವನ್ನು ಪಡೆಯಲು ಸಾಧ್ಯ. ಸಾರ್ವಜನಿಕರ ಸಮಕ್ಷಮದಲ್ಲಿ ಶಾಸ್ತ್ರೋಕ್ತವಾಗಿ ನಡೆಯುವ ವಿವಾಹಕ್ಕೆ ಮನ್ನಣೆ ಇದೆಯೆಂತಲೇ ವಿವಾಹವನ್ನು ಒಂದು ಪವಿತ್ರವಾದ ಬಂಧ ಎಂದು ಕರೆಯುವರು.

ಮಾನವ ಕೋಟಿಯು ಹೆಣ್ಣು ಗಂಡುಗಳ ಸಂಯೋಗದಿಂದಲೇ ಬೆಳೆಯುವುದು. ಆದರೆ ಸಂಯೋಗ ಮಾತ್ರದಿಂದಲೇ ಮಾನವನ ಸಂರಕ್ಷಣೆಯಾಗುವುದಿಲ್ಲ. ಗಂಡು ಹೆಣ್ಣುಗಳು ಬಹು ಕಾಲ ಕೂಡಿ ಇರದಿದ್ದರೆ ಮಕ್ಕಳ ಆರೈಕೆ ಮಾಡುವವರು ಯಾರು? ಹಾಗಾಗಿ ಜನಾಂಗದ ನಿರಂತರ ಗತಿಗಾಗಿ ತಾಯಿಂದೆಗಳು ಮಗುವಿನ ಸಂರಕ್ಷಣೆಯ ಸಲುವಾಗಿ ಕೂಡಿಬಾಳುವುದು ಹಿತಕರವೆಂದು ಕಂಡು ಬಂದುದರಿಂದ ವಿವಾಹವು ಒಂದು ಸಂಸ್ಥೆಯಾಗಿ  ಬೆಳೆಯಿತು. ಈ ವಿವಾಹ ಬಂಧನ ಜೀವಿತದ ಕೊನೆಯವರೆಗೂ ಬೆಳೆಯಿತು. ಸ್ತ್ರೀಪುರುಷರು ಧರ್ಮದ ಎಲ್ಲೆಯನ್ನು ದಾಟದೆ ಸತಿ ಪತಿಗಳಾಗಿ ಬಾಳಲು ವಿವಾಹವೆಂಬುದು ಮಾನವನಷ್ಟೇ ಪ್ರಾಚೀನ. ಭಾರತದಲ್ಲಿ ವಿವಾಹವನ್ನು ಒಂದು ಧಾರ್ಮಿಕ ಸಂಸ್ಕಾರವೆಂದು ಪರಿಗಣಿಸಲಾಗಿದೆ. ವಿವಾಹಗಳು ಧಾರ್ಮಿಕ ರೀತಿ ನೀತಿ, ನಡವಳಿಕೆಗಳಿಗೆ ಅನುಗುಣವಾಗಿ ನಡೆಯುತ್ತವೆ. ವಿವಾಹವು ಮಾನವ ಜೀವನದ ಬಹು ಮುಖ್ಯವಾದ ಅಂಗ. ಹಿಂದೂಗಳಲ್ಲಿ ವಿವಾಹವು ಸ್ವರ್ಗದಲ್ಲಿಯೇ ನಿಶ್ಚಯವಾಗಿರುತ್ತದೆಂದು ದೇವರಿಂದ ಮಾಡಲ್ಪಟ್ಟ ಒಂದು ಪವಿತ್ರ ಬಂಧವೆಂದು ನಂಬಲಾಗಿದೆ. ಹಾಗೆಯೇ ವಿವಾಹವು ಅನಿವಾರ್ಯವಾಗಿದೆ. ಹುಡುಗಿಯು ಪ್ರಾಪ್ತವಯಸ್ಕಳಾಗಿಯೂ ವಿವಾಹವಿಲ್ಲದಿದ್ದರೆ ಕಳಂಕಿತಳು, ಹಾಗೂ ನರಕಕ್ಕೆ ಹೋಗುವಳೆಂಬ ನಂಬಿಕೆಯೂ ಇದೆ. (ಭಾರತೀಯ ಸಾಮಾಜಿಕ ಸಂಸ್ಥೆಗಳು - ಡಾ. ಎಂ. ನಂಜಮ್ಮಣಿ) ವಿವಾಹವಾಗುವುದು ತನ್ನ ಕಾಮತೃಷೆಯನ್ನು ತೀರಿಸಿಕೊಳ್ಳುವುದಕ್ಕಲ್ಲ, ಬದಲಾಗಿ ಕುಟುಂಬವನ್ನು ಮುಂದುವರಿಸಿಕೊಂಡು ಹೋಗುವುದಕ್ಕಾಗಿ, ಒಂದು ಕುಟುಂಬವನ್ನು ಮುಂದುವರಿಸಿಕೊಂಡು ಹೋಗುವುದಕ್ಕಾಗಿ, ಒಂದು ಕುಟುಂಬ ಇನ್ನೊಂದು ಕುಟುಂಬದೊಂದಿಗೆ ಸಂಬಂಧ ಬೆಳೆಸುವುದೂ ಇದೇ ಉದ್ದೇಶದಿಂದ. ವಿವಾಹವು ಎರಡು ಜೀವಗಳ ಮಿಲನವಲ್ಲ, ಬದಲಾಗಿ ಎರಡು ವಂಶಗಳ ಮಿಲನ. ಈ ಬಗೆಯಲ್ಲಿ ಸಮಾಜವೆಂದರೆ ಪರಸ್ಪರ ಭಾಂದವ್ಯ, ಪ್ರೇಮಿಗಳಿಂದ ಒಂದಕ್ಕೊಂದು ಹೆಣೆದುಕೊಂಡ ಕುಟುಂಬಗಳ, ಮನೆತನಗಳ ಗುಂಪು ಎಂದಾಗುತ್ತದೆ. ಈ ಗುಂಪುಗಳಲ್ಲಿ ಸರ್ವಸಮ್ಮತವಿದ್ದರೂ, ಕೊಟ್ಟು ತರವುದರಲ್ಲಿ ಊಟ ಉಪಚಾರಗಳಲ್ಲಿ ಕೆಲವೊಂದು ಕಟ್ಟು ಪಾಡುಗಳ ಅಳವಡಿಸಿಕೊಂಡು ಪ್ರತಿಯೊಂದು ಗುಂಪು ತನ್ನವ್ಯಕ್ತಿತ್ವ ಮತು ಪರಿಶುದ್ಧತೆಯನ್ನು ಕಾಯ್ದುಕೊಳ್ಳುತ್ತದೆ.

ವಿವಾಹವನ್ನು ಸಮಾಜ ಶಾಸ್ತ್ರಜ್ಞರು ತಮ್ಮದೆ ನೆಲೆಯಲ್ಲಿ ವ್ಯಾಖ್ಯಾನಿಸಿದ್ದಾರೆ. "ಸಂತತಿಯನ್ನು ಹೊಂದತಕ್ಕ ಕುಟುಂಬಗಳ ಸ್ಥಾಪನೆಗೆ ಸಮಾಜವು ಮನ್ನಣೆಯನ್ನುಕೊಟ್ಟಂತಹ ಮಾರ್ಗವೇ ವಿವಾಹ" ಎಂದು ಗಿಲಿನ್ ಮತ್ತು

ಗಿಲಿನ್ ಹೇಳುತ್ತಾರೆ "ವಿವಾಹವು ಸ್ತ್ರೀ ಪುರುಷರ ನಡುವೆ ನಡೆಯುವ ಲೈಂಗಿಕ ಮತ್ತು ಮಾನಸಿಕ ಸಂಬಂಧವನ್ನು ದೃಢೀಕರಿಸುವ ಮತ್ತು ಸಂತಾನೋತ್ಪತ್ತಿಗಾಗಿ ಉದ್ದೇಶ ಪೂರ್ವಕವಾಗಿ ಏರ್ಪಡಿಸಿಕೊಂಡ ಒಪ್ಪಂದ" - ಎಂದು ಮಲಿನೋವಸ್ಕಿ ಹೇಳುತ್ತಾನೆ.[1]

1. ಬ್ರಹ್ಮ ವಿವಾಹ :

ಈ ವಿವಾಹ ಪದ್ಧತಿಯು ಬಹು ಜನಪ್ರಿಯವೆನಿಸಿ, ಧರ್ಮಶಾಸ್ತ್ರಕಾರರಿಂದ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ. ಈ ಪದ್ಧತಿಯಂತೆ ಕನ್ಯಾಪಿತೃವು ತನ್ನ ಮಗಳಿಗೆ ಸದ್ಗುಣನೂ, ಕುಲೀನನೂ, ಸುಯೋಗ್ಯನೂ ಆದ ವರನನ್ನು ಹುಡುಕಿ ತನ್ನ ಶಕ್ತ್ಯಾನುಸಾರ ಮಗಳನ್ನು ದಾರೆ ಎರೆದು ವಿವಾಹ ಮಾಡುತ್ತಾನೆ. ಇದಕ್ಕೆ ಕನ್ಯಾ ದಾನವೆನ್ನುವರು. ಹೋಮ, ಪಾಣಿಗ್ರಹಣ, ಸಪ್ತಪದಿ, ಸಭಾ ಪೂಜಾ ಮುಂತಾದ ವಿಧಿ ವಿಧಾನಗಳು ಈ ವಿವಾಹ ಪದ್ಧತಿಯಲ್ಲಿದ್ದು, ಈಗಲೂ ಕೆಲವೊಂದು ಮಾರ್ಪಾಡುಗಳೊಂದಿಗೆ ಹಾಗೆಯೇ ಉಳಿದುಕೊಂಡು ಬಂದಿವೆ. ಇಲ್ಲಿ ಕನ್ಯೆಯಾದವಳಿಗೆ ತನ್ನ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳಲು ಹೆಚ್ಚಿನ ಸ್ವಾತಂತ್ರ್ಯವಿಲ್ಲ. ಆದರೂ ತಂದೆಯಾದವನು ತನ್ನ ಮನಸ್ಸಿಗೆ ವರನು ಒಪ್ಪಿಗೆಯಾದಲ್ಲಿ ಮಾತ್ರ ಈ ವಿವಾಹವನ್ನು ನೆರವೇರಿಸುವನು. ವಾತ್ಸ್ಯಾಯನ ಮುನಿಯ ಪ್ರಕಾರ "ವರನು ಶಿಕ್ಷಿತನಾಗಿರಬೇಕೆಂದು, ಅಶ್ವಲಾಯನ ಋಷಿಯ ಪ್ರಕಾರ "ವರನು ಬುದ್ಧಿವಂತನಾಗಿರಬೇಕೆಂದೂ, ಅಪಸ್ತಂಭ ಋಷಿಯ ಪ್ರಕಾರ" ಸುಂದರಾಂಗನೂ, ಆರೋಗ್ಯವಂತನೂ ಆಗಿರಬೇಕೆಂದು, ಭೌದ್ಧಾಯನ ಋಷಿಯ ಪ್ರಕಾರ ವರನು ಉತ್ತಮ ಚಾರಿತ್ರ್ಯವಂತನಾಗಿರಬೇಕೆಂದು ಒತ್ತಿ ಹೇಳಿದ್ದಾರೆ".

2. ದೈವ ವಿವಾಹಃ

ಈ ಪದ್ಧತಿಯಲ್ಲಿ ಕನ್ಯಾಪಿತೃವು ತನ್ನ ಮಗಳನ್ನು ಆಭರಣಗಳಿಂದ ಅಲಂಕರಿಸಿ ತನ್ನ ಯಜ್ಞದಲ್ಲಿ ಭಾಗವಹಿಸಿದ ಪುರೋಹಿತರಿಗೆ ದಾನವಾಗಿ ಕೊಟ್ಟು, ಆನಂತರ ವಿವಾಹ ವಿಧಿಗಳನ್ನು ನೆರವೇರಿಸುತ್ತಿದ್ದನೆಂದು ತಿಳಿದು ಬರುತ್ತದೆ. ಬೌದ್ಧಾಯನ ಋಷಿಯ ಪ್ರಕಾರ "ಕನ್ಯೆಯನ್ನು ದಕ್ಷಿಣೆಯ ರೂಪದಲ್ಲಿ ಯಜ್ಞದಲ್ಲಿ" ಭಾಗವಹಿಸಿದ ಪುರೋಹಿತರಿಗೆ ಕೊಡುತ್ತಿದ್ದರೆಂದು ತಿಳಿದು ಬರುತ್ತದೆ. ದೈವ ಯಜ್ಞದ ಕಾಲಕ್ಕೆ ಕನ್ಯೆಯನ್ನು ದಕ್ಷಿಣೆಯ ರೂಪದಲ್ಲಿ ಕೊಡುವುದರಿಂದ ಈ ಪದ್ಧತಿಗೆ ದೈವ ವಿವಾಹ ಎಂಬ ಹೆಸರು ಬಂದಿದೆ. ಬ್ರಹ್ಮ ವಿವಾಹದಂತೆ

ಇಲ್ಲಿಯೂ ಕನ್ಯಾದಾನ ವಿರುತ್ತದೆ. ಯಾಗ ಯಜ್ಞಗಳು ಸಾಮಾನ್ಯವಾಗಿದ್ದ ಕಾಲದಲ್ಲಿ ಈ ಬಗೆಯ ವಿವಾಹವು ಆಚರಣೆಯಲ್ಲಿತ್ತೆಂದು ತಿಳಿಯಬಹುದು.

3. ಆರ್ಶವಿವಾಹಃ-

ಕನ್ಯಾ ಪಿತೃ ವರನಿಂದ ಎರಡು ಜೊತೆ ಹಸುಗಳನ್ನು ಪಡೆದು ನಂತರ ತನ್ನ ಮಗಳನ್ನು ವಿವಾಹ ಮಾಡಿಕೊಡುವ ಪದ್ಧತಿಯನ್ನು "ಆರ್ಶ ವಿವಾಹ" ವೆನ್ನುವರು. ಗೃಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸಿ ತನ್ನ ಜೀವನವನ್ನು ಸಫಲ ಮಾಡಿಕೊಳ್ಳುವುದಕ್ಕೆ ಮಾವನಿಗೆ ಕಾಣಿಕೆಯ ರೂಪದಲ್ಲಿ ಹಸುಗಳನ್ನು ನೀಡುತ್ತಿದ್ದು, ಆ ಹಸುಗಳು ದೇವ ಕಾರ್ಯಕ್ಕೆ ಬಳಕೆಯಾಗುತ್ತಿದ್ದವು. ಈ ಪದ್ಧತಿಯು ಪುರೋಹಿತ ಕುಟುಂಬಗಳಲ್ಲಿ ಹೆಚ್ಚು ರೂಢಿಯಲ್ಲಿದ್ದ ಕಾರಣ ಇದನ್ನು "ಆರ್ಶವಿವಾಹ" ಎಂದು ಕರೆಯಲಾಗಿದೆ. ಕ್ರಿ.ಶ.4ನೇ ಶತಮಾನದ ಕಾಲದಲ್ಲಿ ಈ ಪದ್ಧತಿ ಆಚರಣೆಯಲ್ಲಿತ್ತೆಂದು ತಿಳಿದು ಬರುತ್ತದೆ. ಪ್ರಜೋತ್ಪಾದನೆಯ ಕ್ರಿಯೆಯಿಂದ ಶಿಶುವಿನ ಜನನದವರೆಗೆ ಮಾತ್ರ ಮುಂದುವರೆಯದೆ, ಅನಂತರವೂ ಹೆಚ್ಚುಕಾಲ ಮುಂದುವರೆಯುವ ಗಂಡು ಹೆಣ್ಣುಗಳ ನಡುವಿನ ಸಂಬಂಧಕ್ಕೆ ವಿವಾಹ ಎನ್ನಬಹುದು (ವೆಸ್ಟರ್ ಮಾರ್ಕ್)

ಒಟ್ಟಾರೆ ವಿವಾಹ ಮಾನವನ ಬದುಕಿನ ಒಂದು ಪ್ರಮುಖ ಹಾಗೂ ಸಾರ್ವತ್ರಿಕ ಸ್ವರೂಪದ ಸಾಮಾಜಿಕ ಸಂಸ್ಥೆ, ಮಾನವನ ಲೈಂಗಿಕ ಜೀವನ ಹಾಗೂ ಲೈಂಗಿಕ ಸಂಬಂಧಗಳನ್ನು ನಿಯಂತ್ರಿಸುವುದಕ್ಕಾಗಿ ಸಮಾಜದಿಂದ ಸ್ಥಾಪಿಸಲ್ಪಟ್ಟ ಸಂಸ್ಥೆ. "ವಿವಾಹವು ಸಂತಾನಾಪೇಕ್ಷೆಯುಳ್ಳ ಗಂಡು ಹೆಣ್ಣುಗಳ ಕರಾರು ಅಥವಾ ಒಪ್ಪಂದ, ವಿವಾಹವು ಲೈಂಗಿಕ ಜೀವನ ನಡೆಸಲು ಮಾನವನಿಗೆ ನೀಡಲಾಗಿರುವ ಪರವಾನಗಿ" ಎಂದು ಮುಂತಾಗಿ ಕುರಿತು ವ್ಯಾವಹಾರಿಕ ನೆಲೆಯಲ್ಲಿ ವ್ಯಾಖ್ಯಾನ ಮಾಡಲಾಗಿದೆ.

ಆದರೆ ಅಧ್ಯಾತ್ಮಿಕ ದೃಷ್ಠಿಯನ್ನು ಹೊಂದಿರುವ ಹಿಂದೂಗಳು ಇದೊಂದು "ಪವಿತ್ರವಾದ ಬಂಧ", ಧಾರ್ಮಿಕವಾದ ವಿಧಿ ಎಂದೇ ಪರಿಗಣಿಸುತ್ತಾರೆ. ಪುರುಷಾರ್ಥಗಳ ಸಾಧನೆಗಾಗಿ ವಿವಾಹದ ಮೂಲಕ ಗೃಹಸ್ಥಾಶ್ರಮ ಸ್ವೀಕರಿಸುವುದು ಅವಶ್ಯ ಮತ್ತು ಪವಿತ್ರ ಕಾರ್ಯವೆಂದು ಹಿಂದೂ ಶಾಸ್ತ್ರಗಳು ಬಹಳ ಹಿಂದೆಯೇ ಹೇಳಿವೆ. "ವಿವಾಹವೆನ್ನುವ ಸಂಸ್ಥೆಯು ಸಾರ್ವತ್ರಿಕವಾಗಿದ್ದರೂ, ಅದರ ಸ್ವರೂಪಗಳು ಎಲ್ಲಾ ಕಡೆಯು ಒಂದೇ ರೀತಿ ಇರುತ್ತದೆ ಎಂದು ಹೇಳಲಾಗದು. ವಿವಾಹದ ವಯಸ್ಸು ಸಂಗಾತಿಗಳ ಆಯ್ಕೆ ಕ್ರಮ,

ಸಮಾರಂಭದ ಸ್ವರೂಪ, ವಿಧಿ ವಿಧಾನಗಳು ಒಂದೊಂದು ಕಡೆ ಒಂದೊಂದು ತೆರನಾಗಿರುತ್ತವೆ'' (ಸಮಾಜ ಶಾಸ್ತ್ರದ ಮೂಲತತ್ವಗಳು - ಚ.ನ ಶಂಕರರಾವ್)

ಭಾರತೀಯ ಸ್ಮೃತಿಗಳು ವಿವಾಹವನ್ನು ಎಂಟು ಬಗೆಯಲ್ಲಿ ವಿವರಿಸುತ್ತವೆ. ಹಾಗೆಯೇ ಪ್ರಾಚೀನ ಭಾರತೀಯರಲ್ಲಿ ಎಂಟು ಬಗೆಯ ವಿವಾಹ ಪದ್ಧತಿಗಳು ರೂಢಿಯಲ್ಲಿದ್ದವು. ಬ್ರಹ್ಮ, ಧೈವ, ಆರ್ಶ, ಪ್ರಜಾಪತ್ಯ, ಗಾಂಧರ್ವ, ಅಸುರ ರಾಕ್ಷಸ ಮತ್ತು ಪೈಶಾಚ - ಎಂಬ ಎಂಟು ಬಗೆಯ ವಿವಾಹಗಳಿದ್ದವು. ಸ್ಮೃತಿಗಳಲ್ಲಿ ಪ್ರಶಸ್ತ ಮತ್ತು ಅಪ್ರಶಸ್ತ ಎಂಬ ಎರಡು ಭಾಗಗಳಲ್ಲಿ ಈ ಎಂಟು ಬಗೆಯ ವಿವಾಹ ಪದ್ಧತಿಗಳನ್ನು ವಿವರಿಸಲಾಗಿದೆ. ಬ್ರಹ್ಮ, ಧೈವ, ಆರ್ಶ, ಪ್ರಜಾಪತ್ಯ ವಿವಾಹ ಪದ್ಧತಿಗಳನ್ನು ಪ್ರಶಸ್ತ ವಿವಾಹಗಳೆಂದು ಕರೆಯಲಾಗಿದೆ. ಗಾಂಧರ್ವ, ಅಸುರು, ರಾಕ್ಷಸ ಮತ್ತು ಪೈಶಾಚ ವಿವಾಹಗಳನ್ನು ಅಪ್ರಶಸ್ತ ವಿವಾಹಗಳೆಂದು ಕರೆಯಲಾಗಿದೆ. ಮೊದಲಿಗೆ ನಾಲ್ಕರಲ್ಲಿ ಕನ್ಯಾದಾನ ಮತ್ತು ಧಾರ್ಮಿಕ ವ್ರತಾಚರಣೆಗಳಲ್ಲಿದಿರುವ ಕಾರಣ ಅವುಗಳನ್ನು ಅಪ್ರಶಸ್ತ ವಿವಾಹಗಳೆಂದು ಕರೆಯಲಾಗಿದೆ.

4. **ಪ್ರಜಾಪತ್ಯ ವಿವಾಹ ಪದ್ಧತಿಃ**

ಕನ್ಯಾ ಪಿತೃವು ತನ್ನ ಮಗಳು ಇಚ್ಛಿಸಿದ ವರನಿಗೆ ವಿವಾಹ ಮಾಡಿಕೊಟ್ಟು, ನಂತರ ''ನೀವಿಬ್ಬರೂ ನಿಮ್ಮ ಧರ್ಮಗಳನ್ನು ಒಟ್ಟಿಗೆ ಆಚರಣೆಗೆ ತನ್ನಿರಿ'' ಎಂದು ಹರಸುವನು. ಇಲ್ಲಿ ಕನ್ಯೆಗೆ ತನ್ನ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ ವಿತ್ತು. ಆದರೆ ಇದು ಕನ್ಯಾದಾನಕ್ಕಿಂತ ಶ್ರೇಷ್ಠವಾದುದಲ್ಲ ಎಂಬ ಅಭಿಪ್ರಾಯಗಳಿವೆ.

5. **ಅಸುರ ವಿವಾಹ :**

ಅಸುರ ವಿವಾಹದಲ್ಲಿ ವರನಾದವನು ಕನ್ಯಾ ಪಿತೃವಿಗೆ ಕನ್ಯಾ ಶುಲ್ಕ ಅಥವಾ ವದು ಧಕ್ಷಿಣೆಯನ್ನು ತನ್ನ ಶಕ್ತ್ಯಾನುಸಾರ ನೀಡಿ ಅಕೆಯನ್ನು ವಿವಾಹವಾಗುವ ವಾಡಿಕೆಯಿತ್ತು. ಆದರೆ ಧರ್ಮ ಸೂತ್ರ ಕಾರರು ಇದಕ್ಕೆ ಮನ್ನಣೆಯನ್ನು ನೀಡಲಿಲ್ಲ. ಈ ಕ್ರಮದಿಂದ ಕನ್ಯೆಯನ್ನು ವಿಕ್ರಯ ಮಾಡಿದಂತಾಗುವುದು. ಅಂತಹ ಕನ್ಯೆಯ ಜೊತೆ ಬಾಳಿ ಯಜ್ಞಯಾಗಾದಿಗಳ ಮಾಡಬಾರದೆಂದು ತಿಳಿಸಿದ್ದಾರೆ. ಬೌದ್ಧಯಾನರ ಪ್ರಕಾರ ''ಕನ್ಯೆಯನ್ನು ವಿಕ್ರಯ ಮಾಡಿದ ತಂದೆ ತಾಯಿಗೆ ಘೋರ ನರಕ ಪ್ರಾಪ್ತಿಯಾಗುವುದು'' ಎಂದಿದ್ದಾರೆ. ಈ ಬಗೆಯ

ವಿವಾಹವು ಇಂದಿಗೂ ಕೆಲವು ಕೆಳಜಾತಿಯವರಲ್ಲಿ, ಆದಿವಾಸಿಗಳಲ್ಲಿ ಬಂಗಾಳದ ಕೆಲವು ಬ್ರಾಹ್ಮಣ ಪಂಗಡಗಳಲ್ಲಿ ಕಂಡು ಬರುತ್ತದೆ.

6. **ಗಾಂಧರ್ವ ವಿವಾಹ :**

ಈ ವಿವಾಹ ಪದ್ಧತಿಯು ವಧುವರರ ನಡುವಿನ ಪ್ರೀತಿ, ವಾತ್ಸಲ್ಯದಿಂದ ಉಂಟಾಗುವ ವಿವಾಹವಾಗಿದೆ. ಕನ್ಯೆಯ ಪಾಲಕರು ಈ ಗಂಧರ್ವವಿವಾಹವನ್ನು ಏರ್ಪಡಿಸುತ್ತಿರಲಿಲ್ಲ. ಪರಸ್ಪರ ಪ್ರೀತಿಸಿದ ವಧು ವರರೇ ವಿವಾಹ ಕಾರ್ಯವನ್ನು ಏರ್ಪಡಿಸಿಕೊಳ್ಳುತ್ತಿದ್ದರು. ಪುರಾತನ ಧಾರ್ಮಿಕ ಗ್ರಂಥಗಳಾದ ಋಗ್ವೇದ ಮತ್ತು ಅಥರ್ವಣ ವೇದಗಳಲ್ಲಿ ಗಂಧರ್ವವಿವಾಹದ ಉಲ್ಲೇಖಗಳಿವೆ. ಹಿಮಾಲಯದಲ್ಲಿ ವಾಸಿಸುವ ಗಂಧರ್ವರ ವಿವಾಹವು ಒಂದು ಉತ್ತಮ ಉದಾಹರಣೆ. ಕೆಲವು ಚಿಂತಕರ ಹಾಗೂ ಸ್ವತಃ ಕಣ್ವ ಋಷಿಯ ಅಭಿಪ್ರಾಯದಲ್ಲಿ ಗಾಂಧರ್ವ ವಿವಾಹವು ಪವಿತ್ರ ಹಾಗೂ ಶ್ರೇಷ್ಠವೆಂದು ಹೇಳಿದ್ದಾರೆ. ಆದರೆ ಪುರಾತನ ಬರಹಗಾರರು ಇದನ್ನು ಧಾರ್ಮಿಕ ಮತ್ತು ನೈತಿಕ ದೃಷ್ಟಿಯಲ್ಲಿ ಸಮರ್ಥಿಸಿಲ್ಲ. ಇದರಲ್ಲಿ ಧಾರ್ಮಿಕ ವಿಧಿ ವಿಧಾನಗಳಲ್ಲಿದ್ದರಿಂದ ಮೊದಲಿನ ನಾಲ್ಕು ವಿವಾಹ ಪದ್ಧತಿಗಿಂತ ಕೀಳು ಮಟ್ಟದ್ದಾಗಿದೆ ಎಂದು ಹೇಳುವರು. ಕ್ಷತ್ರಿಯರಲ್ಲಿ ಈ ಗಾಂಧರ್ವ ವಿವಾಹ ಪದ್ಧತಿಯು ಹೆಚ್ಚು ರೂಢಿಯಲ್ಲಿರುವುದು ತಿಳಿದು ಬರುತ್ತದೆ.

7. **ರಾಕ್ಷಸ ವಿವಾಹ :**

ಈ ರಾಕ್ಷಸ ವಿವಾಹ ಪದ್ಧತಿಯಲ್ಲಿ ವರನಾದವನು ವದುವನ್ನು ಆಕೆಯ ಮನೆಯಿಂದ ನಿದ್ರಿಸುವ ಸ್ಥಿತಿಯಲ್ಲಿದ್ದರೂ ಲೆಕ್ಕಿಸದೆ ಅಪಹರಿಸಿಕೊಂಡು ಹೋಗಿ ವಿವಾಹವಾಗುವುದಕ್ಕೆ ರಾಕ್ಷಸ ವಿವಾಹ ಎನ್ನುವರು. ತನ್ನನ್ನು ತಡೆಯಲು ಬಂದವರನ್ನು ಗಾಯಗೊಳಿಸಿ, ಮಧುವಿನ ತಂದೆತಾಯಿಯರಾದರೂ ಸರಿ ಅವರನ್ನು ಬೆದರಿಸಿ ಅಥವಾ ಸಾಯಿಸಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿ ಆಕೆಯನ್ನು ವಿವಾಹವಾಗುವನು. ಈ ಕ್ರಮದ ವಿವಾಹವು ಕ್ಷತ್ರಿಯರಿಗೆ ಯೋಗ್ಯವಾದುದೆಂದು ವಶಿಷ್ಠರು ಅಭಿಪ್ರಾಯ ಪಡುತ್ತಾರೆ. ಈ ರೀತಿ ಬಲಾತ್ಕಾರವಾಗಿ ಸೆಳೆದೂಯ್ದ ಕನ್ಯೆಗೆ ಸಮಾಜದಲ್ಲಿ ಕಾನೂನಿನ ಪ್ರಕಾರ ಸ್ಥಾನ ಮಾನಗಳನ್ನು ಕೊಡಲಾಗುವುದು. ಈ ರಾಕ್ಷಸ ವಿವಾಹವು ಭಾರತದಲ್ಲಿ ರಜಪೂತರ ಕಾಲದವರೆಗೂ ರೂಢಿಯಲ್ಲಿತ್ತು. ಇಂದಿಗೂ ಕೆಲವು ಆದಿವಾಸಿ ಸಮುದಾಯಗಳಲ್ಲಿ ಈ ಪದ್ಧತಿ ರೂಢಿಯಲ್ಲಿದೆ.

8. **ಪೈಶಾಚ ವಿವಾಹಃ**

ವಿವಾಹಗಳಲ್ಲಿ ಅತ್ಯಂತ ಹೀನವಾದ ನಿಕೃಷ್ಟವಾದ ವಿವಾಹಪದ್ಧತಿ ಇದು. ನಿದ್ರಿಸುತ್ತಿರುವ, ಸ್ಮೃತಿತಪ್ಪಿರುವ ಅಥವಾ ಮಾನಸಿಕವಾಗಿ ಅಸ್ವಸ್ಥಳಾದ ಕನ್ಯೆಯನ್ನು ಮೋಸದಿಂದ ಸಂಬೋಗಿಸಿ ನಂತರ ಅದೇ ಕಾರಣಕ್ಕಾಗಿ ಆಕೆಯನ್ನು ವಿವಾಹವಾಗುವ ಪದ್ಧತಿಯಾಗಿದೆ. ಮನುತನ್ನ ಧರ್ಮ ಶಾಸ್ತ್ರದಲ್ಲಿ ಇದನ್ನು ಕಾನೂನು ಬಾಹಿರ ವಿವಾಹವೆಂದು ಖಂಡಿಸಿದ್ದಾನೆ. ಅಪಸ್ಥಂಭ ಮತ್ತು ವಶಿಷ್ಠರು ಇದರ ಬಗ್ಗೆ ಏನನ್ನೂ ಹೇಳಿಲ್ಲ.

ಒಟ್ಟಾರೆ ಮೇಲೆ ವಿವರಿಸಿದ ವಿವಿದ ಬಗೆಯ ವಿವಾಹ ಪದ್ದತಿಗಳು ಒಂದೊಮ್ಮೆ ಇದ್ದಂತಹ ಸಮಾಜದ ಪರಿಸ್ಥಿತಿಗಳಿಗೆ ಸಂಗತವೆಸಬಹುದೇ ಹೊರತು ಪ್ರಸ್ತುತ ಸಮಾಜಕ್ಕಲ್ಲ. ಧರ್ಮಶಾಸ್ತ್ರ ಕಾರರೂ ಕೂಡ ಈ ಎಲ್ಲಾ ಪದ್ಧತಿಗಳನ್ನು ಯೋಗ್ಯವಾದವುಗಳೆಂದು ತಿಳಿಸಿಲ್ಲ. ಸ್ಮೃತಿಕಾರ ಮನುವಿನ ಪ್ರಕಾರ ಬ್ರಾಹ್ಮಣ ವರ್ಗದವರಿಗೆ ಮೊದಲ ಆರು ಬಗೆಯ ವಿವಾಹಗಳು, ಕೊನೆಯ ನಾಲ್ಕು ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಎಂದಿದ್ದಾನೆ. ಆದರೆ ಐದನೇ ಮತ್ತು ಏಳನೇ ಪ್ರಕಾರಗಳು (ಗಾಂಧರ್ವ ಮತ್ತು ರಾಕ್ಷಸ) ಕ್ಷತ್ರಿಯರಿಗೆ ಮಾತ್ರ ಸಂಗತವೆಂದು ತಿಳಿಸಿದ್ದಾನೆ. ಒಟ್ಟಾರೆ ವಿವಾಹ ಯೋಗ್ಯಳಾದ ಕನ್ಯೆಯನ್ನು ವಿಧಿವತ್ತಾಗಿ "ಕನ್ಯಾಧಾನ" ವಾಗಿ ಸುಯೋಗ್ಯ ವರನಿಗೆ ನೀಡುವ ಕ್ರಮವೇ ವಿವಾಹದ ಹಲವು ಪ್ರಕಾರಗಳಲ್ಲಿ ಶ್ರೇಷ್ಠವಾದುದೆಂದು ಇಂದಿಗೂ ಎಲ್ಲರು ಒಪ್ಪಿಕೊಂಡು ಬಂದಿದ್ದಾರೆ.

ಹಿಂದೂ ವಿವಾಹವು ಒಂದು ಸಾಮಾಜಿಕ ಒಪ್ಪಂದವಲ್ಲ. ಅದೊಂದು ಪವಿತ್ರವಾದ ಸಂಸ್ಕಾರ. ಹಿಂದುಗಳಿಗೆ ವಿವಾಹವು ಸ್ತ್ರೀಪುರುಷರ ನಡುವಿನ ಒಂದು ಪವಿತ್ರ ಸಂಯೋಗವಾಗಿದೆ. ಮಾನವ ಜೀವನದಲ್ಲಿ ಸರಿಯಾದ ಸಮಯಕ್ಕೆ ನೇರವೇರಿಸಬೇಕಾದ ಸಂಸ್ಕಾರಗಳಲ್ಲಿ ವಿವಾಹವೂ ಒಂದು. ಹಿಂದೂ ವಿವಾಹವು ಕಾಲಕಾಲಕ್ಕೆ ನೆರವೇರಿಸುವುದು ಅವಶ್ಯವಾಗಿದೆ. ಹೋಮ, ಕನ್ಯಾದಾನ, ಪಾಣಿಗ್ರಹಣ, ಮಾಂಗಲ್ಯ ಧಾರಣೆ ಕ್ರಿಯೆಗಳು ಅಗ್ನಿಯ ಸಮ್ಮುಖದಲ್ಲಿ ಪುರೋಹಿತರಿಂದ ಮಂತ್ರೋಚ್ಚಾರಣೆಯ ಮೂಲಕ ಮಾಡಲ್ಪಡುವಂತವು.

1. **ಹೋಮಃ-**

ಅಗ್ನಿ ಕುಂಡದಲ್ಲಿ ಆಜ್ಯವನ್ನು ಅರ್ಪಣೆ ಮಾಡುವುದಕ್ಕೆ ಹೋಮವೆಂದು ಹೆಸರು, ಹಿಂದೂ ವಿವಾಹ ಪದ್ಧತಿಯಲ್ಲಿ ಹೋಮವು ಅತಿ ಮಹತ್ವದ ಶಾಸ್ತ್ರೋಕ್ತ ಕರ್ಮವಾಗಿದೆ. ಹೋಮಗಳಲ್ಲಿ ಅನೇಕ ವಿಧಗಳಿದ್ದು ಅದರಲ್ಲಿ "ಲಾಜಹೋಮ" ವು ಮಹತ್ವದ್ದಾಗಿದೆ. ಈ ಹೋಮವು ಫಲವತ್ತತೆ ಮತ್ತು ಅಭ್ಯುದಯದ

ಧ್ಯೋತಕವಾಗಿದೆ. ಹಿಂದೂಗಳ ವಿವಾಹದಲ್ಲಿ ಅಗ್ನಿ ದೇವನಿಗೆ ವಿಶೇಷ ಮಹತ್ವವಿದೆ. ಅಗ್ನಿಯ ಸಮ್ಮುಖದಲ್ಲಿ ಅಗ್ನಿಸಾಕ್ಷಿಯಾಗಿ ಹಿಂದೂ ವಿವಾಹಗಳು ನೆರವೇರಲ್ಪಡುತ್ತವೆ. ಅಗ್ನಿ ದೇವನು ಹಿಂದೂ ವಿವಾಹದ ದಾಖಲೆ, ಅಧಿಕಾರಿ ಹಾಗೂ ಸಾಕ್ಷೀರೂಪವಾಗಿರುತ್ತಾನೆ.

2. **ಕನ್ಯಾದಾನ:**

ಕನ್ಯೆಯನ್ನು ಶಾಸ್ತ್ರೋಕ್ತವಾಗಿ ಧಾರೆ ಎರೆದು ಕೊಡುವ ವ್ರತಾಚಾರಣೆಯಾಗಿದೆ. ಈ ಕ್ರಮದಲ್ಲಿ ಕನ್ಯೆಯನ್ನು ವರನಿಗೆ ದಾನದ ರೂಪದಲ್ಲಿ ತಂದೆ, ತಾತ, ಸಹೋದರ ಕುಲವಂದಿಗರು ಮತ್ತು ತಾಯಿಯಾದವರು ಕನ್ಯಾದಾನ ಮಾಡುವ ಅಧಿಕಾರಿವನ್ನು ಹೊಂದಿರುತ್ತಾರೆ ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ.[2]

ಈ ಕನ್ಯಾದಾನವು ತಂದೆಯ ಮೇಲಿದ್ದ ಭಾರ ಮತ್ತು ತಂದೆಯ ಜವಾಬ್ದಾರಿಯನ್ನು ಅವಳ ಪತಿಗೆ ವರ್ಗಾಯಿಸುವ ಪದ್ಧತಿಯಾಗಿದೆ. ಇದರಲ್ಲಿ ಪತಿಯಾದವನು ಕನ್ಯೆಯ ಮೇಲೆ ತಾನು ಹೊಂದ ಬಹುದಾದ ಯಜಮಾನತ್ವವನ್ನು ಸ್ವೀಕರಿಸುತ್ತಾನೆ.

3. **ಪಾಣಿಗ್ರಹಣ:**

ಪಾಣಿಗ್ರಹಣವು ಹಿಂದೂ ವಿವಾಹದಲ್ಲಿಮತ್ತೊಂದು ಮುಖ್ಯ ಆಚರಣೆ ಪಾಣಿಗ್ರಹಣ ಕರ್ಮದಲ್ಲಿ ವರನು ಅಗ್ನಿ ಸಾಕ್ಷಿಯಾಗಿ ಕನ್ಯೆಯ ಕೈಹಿಡಿದು ಅವಳನ್ನು ವಿವಾಹವಾಗುತ್ತಾನೆ. ಇದು ವರನು ಕನ್ಯೆಯ ಜವಾಬ್ದಾರಿಯನ್ನು ವಹಿಸಿಕೊಂಡು ಮುಂದೆ ಆಕೆಯ ರಕ್ಷಕನಾಗಿರುವುದಕ್ಕೆ ಸಾಕ್ಷೀರೂಪವಾಗಿದೆ.

4. **ಮಾಂಗಲ್ಯದಾರಣೆ:**

ಮಾಂಗಲ್ಯಧಾರಣೆ ಎಂಬ ಶಾಸ್ತ್ರೋಕ್ತ ಕರ್ಮವು ಸ್ಮೃತಿಗಳ ಕಾಲದಲ್ಲಿ ಬಳಕೆಯಲ್ಲಿರಲಿಲ್ಲ ಆನಂತರ ಇದು ರೂಢಿಗೆ ಬಂದ ಪದ್ಧತಿಯಾಗಿದೆ. ಹಿಂದೂಗಳ ವಿವಾಹ ಸಂದರ್ಭದಲ್ಲಿ ಮಾಂಗಲ್ಯಧಾರಣೆ ಮುಖ್ಯವಾದ ಶಾಸ್ತ್ರೋಕ್ತ ಕರ್ಮವೆಂದು ತಿಳಿಯಲಾಗಿದೆ. ಇದು ವರನು ವಧುವಿನ ಕೊರಳಿಗೆ ಹರಿಸಿಣದಾರದಲ್ಲಿ ಪೋಣಿಸಿದ ತಾಳಿ ಅಥವಾ ಮಾಂಗಲ್ಯವೆಂಬ ಪವಿತ್ರವೆಂದು ಭಾವಿಸಲ್ಪಡುವ ವಸ್ತುಗಳನ್ನು ಕಟ್ಟುವ ಶಾಸ್ತ್ರೋಕ್ತ ಕರ್ಮವಾಗಿದೆ.

5. **ಸಪ್ತಪದಿ:**

ಸಪ್ತಪದಿಯು ವಿವಾಹದ ಕೊನೆಯ ಮುಖ್ಯವಾದ ಶಾಸ್ತ್ರೋಕ್ತ ಕರ್ಮವಾಗಿದೆ. ಎಲ್ಲ ಕರ್ಮಗಳಿಗಿಂತ ಮುಖ್ಯವಾದ ಈ ಸಪ್ತಪದಿ ಕರ್ಮವನ್ನು ನೆರವೇರಿಸದಿದ್ದರೆ ಹಿಂದೂ ವಿವಾಹವು ಪೂರ್ಣವಾಗುವುದಿಲ್ಲ. ವಧು ವರರು ಜೊತೆಗೂಡಿ ಏಳು ಹೆಜ್ಜೆಗಳನ್ನು ಇಡುವುದರ ಮೂಲಕ ನೆರವೇರಿಸುತ್ತಾರೆ.

ಒಟ್ಟಾರೆ ಭಾರತೀಯರಲ್ಲಿ ಮೇಲಿನ ಎಲ್ಲಾ ಆಚರಣೆಗಳು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಅಸ್ತಿತ್ವದಲ್ಲಿರುವುದನ್ನು ಬಹುತೇಕ ಜಾತಿ, ಜನಾಂಗಗಳಲ್ಲಿ ಗಮನಿಸಬಹುದಾಗಿದೆ. ಅದರಲ್ಲೂ ಒಕ್ಕಲಿಗ ಸಮುದಾಯದ ಪ್ರಬಲ ಒಳಪಂಗಡವಾದ ಕುಂಚಿಟಿಗರು ಬಹುತೇಕ ಮೇಲೆ ತಿಳಿಸಿದ ಹಿಂದೂ ವಿವಾಹ ಪದ್ಧತಿಯನ್ನೇ ಬಹುತೇಕ ಆಚರಿಸುವುದನ್ನು ಗಮನಿಸಬಹುದು.

ಕುಂಚಿಟಿಗ ಜನಾಂಗದಲ್ಲಿ ಬಾಲ್ಯದಲ್ಲಿಯೇ ವಿವಾಹ ಮಾಡುವ ಪದ್ಧತಿಯು ಹಿಂದೆ ರೂಢಿಯಲ್ಲಿತ್ತು. ಕಾಲಕ್ರಮೇಣ ಸುಮಾರು ಆರೇಳು ದಶಕಗಳಿಂದೀಚೆಗೆ ಕಡಿಮೆಯಾಗಿ ತಾರುಣ್ಯಕ್ಕೆ ಬಂದಮೇಲೆ ಮದುವೆಗಳು ನಡೆಯುತ್ತಿವೆ. ವಿವಾಹ ವೆನ್ನುವುದು ಒಂದು ಗಂಡು ಹೆಣ್ಣುಗಳ ಜೀವನ ಬಂಧನದ ಉದ್ದೇಶವನ್ನು ಒಳಗೊಂಡಿದೆ. ಕೆಲವೊಂದು ನೀತಿನಿಯಮಗಳಿಂದ ಕೂಡಿದ್ದು ಜೀವಿತದ ಕೊನೆಯ ವರೆಗೂ ಪ್ರೀತಿ, ವಿಶ್ವಾಸ, ವಾತ್ಸಲ್ಯ, ಪರಸ್ಪರರು ಪೂರಕವಾಗಿ ಕಷ್ಟ ಸುಖಗಳನ್ನು ಸುಮನಾಗಿ ಹಂಚಿಕೊಂಡು ಅರಿತು ಬಾಳುವುದೇ ಈ ವಿವಾಹದ ಉದ್ದೇಶವಾಗಿದೆ. ಇದನ್ನೇ ದಾಂಪತ್ಯ ಜೀವನವೆಂದು ಕರೆಯುವರು. ಮಾನವನ ಜೀವನದಲ್ಲಿ ಶಿಸ್ತು, ಸಹನೆ ಸಂಯಮಗಳಿಂದ ಕೂಡಿದ ಅನ್ಯೋನ್ಯವಾದ ಸಾಂಸಾರಿಕ ಜೀವನ ವಿಧಾನವಾಗಿದೆ. ಹಾಗಾಗಿ ಕುಂಚಿಟಿಗರಲ್ಲಿ ಈ ವಿವಾಹ ಪದ್ಧತಿಯು ಒಂದು ವಿಶಿಷ್ಠ ಸ್ಥಾನವನ್ನು ಪಡೆದುಕೊಂಡಿದೆ. ಈ ವಿವಾಹದ ಸಮಯದಲ್ಲಿ ನಡೆಯುವ ಆಚರಿಲ್ಪಡುವ ಸಂಪಾದ್ರಾಯ, ಆಚರಣೆ, ಅನುಸರಿಸುವ ಪದ್ಧತಿ, ಅವುಗಳಲ್ಲಿ ಉಪಯೋಗಿಸುವ ಪದಾರ್ಥ ಸಾಮಗ್ರಿಗಳನ್ನು ಕುರಿತು, ಅವುಗಳ ಹಿನ್ನೆಲೆಯನ್ನು ಅಳವಾಗಿ ತಿಳಿಯುವುದೇ ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

---

1. ಕುಂಚಿಟಿಗರ ಮದುವೆ ಸಂಪ್ರದಾಯಗಳು, ಆಚರಣೆಗಳು - ಲೇ ಹೆಚ್. ಬಿ.ಶಿವಕುಮಾರ್ ಪು ಸಂ.9
2. ಭಾರತೀಯ ವಿವಾಹ ಪದ್ಧತಿಯ ಇತಿಹಾಸ - ಲೇ . ವಿ.ಕಾ. ರಾಜವಾಡೆ 1993 ಮತ್ತು
   ಕುಂಚಿಟಿಗರ ಮದುವೆ ಸಂಪ್ರದಾಯಗಳು ಮತ್ತು ಅಚರಣೆಗಳು - ಲೇ . ಹೆಚ್.ಬಿ. ಶಿವಕುಮಾರ್ ಪು.ಸಂ.15

# ಅಧ್ಯಾಯ - 6

## ಕುಂಚಿಟಿಗರ ಮದುವೆ ಸಂಪ್ರದಾಯಗಳು

ಮಾನವ ಜನಾಂಗದ ಇತಿಹಾಸವನ್ನು ಗಮನಿಸಿದಾಗ ಆಚರಣೆಗಳು ಸಹ ಅವನ ಜೊತೆಯಲ್ಲಿಯೇ ಹುಟ್ಟಿ ಬಂದವುಗಳಾಗಿವೆ. ಆತನ ಬದುಕಿನುದ್ದಕ್ಕೂ ನಡೆದು ಬಂದ ಶ್ರೇಷ್ಠ ವಿಧಿ ವಿಧಾನಗಳಾಗಿವೆ. ಈ ಆಚರಣೆಗಳಿಂದ ಮಾನವನ ಬದುಕು ಹಸನುಗೊಳ್ಳುತ್ತಾ ಒಂದು ಪ್ರದಾನ ನೆಲೆಗೆ ತಂದು ನಿಲ್ಲಿಸುವ ದಾರಿದೀಪಗಳಾಗಿವೆ. ಆಚರಣೆಗಳಿಲ್ಲದ ಜೀವನ ನೀರಸವಾಗಿರುತ್ತದೆ. ರಸಮಯ ಬದುಕನ್ನು ಕಟ್ಟಿಕೊಳ್ಳುವ ಸಲುವಾಗಿ, ಸಮೃದ್ಧ ಜೀವನ ನಡೆಸುವ ಸಲುವಾಗಿ ಆಚರಣೆಗಳನ್ನು ಅನುಸರಿಸಿಕೊಂಡು ಬಂದಿದ್ದಾನೆ. ಹಬ್ಬ ಹರಿದಿನ, ಜಾತ್ರೆ ಉತ್ಸವ, ಮದುವೆ ಮುಂಜಿಗಳಂತಹ ಪ್ರತಿಯೊಂದು ಸಂದರ್ಭದಲ್ಲಿ ವಿಧಿವತ್ತಾಗಿ ಆಚರಣೆಗಳನ್ನು ತಪ್ಪದೇ ಪಾಲಿಸಿಕೊಂಡು ಬಂದಿದ್ದಾನೆ. ದೇಶ, ಭಾಷೆ, ಪ್ರಭೇದ, ಜನಾಂಗ, ಬೌಗೋಳಿಕ ಲಕ್ಷಣಗಳಿಗ ನುಗುಣವಾಗಿ ತನ್ನದೇ ಆದ ನಿರ್ಧಿಷ್ಠ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬದುಕಿನ ರಸಮಯ ಕ್ಷಣಗಳನ್ನು ಅನುಭವಿಸುತ್ತಾ ಜೀವನ ಸಾಗಿಸುತ್ತಾ ಬಂದಿದ್ದಾನೆ.

ಭಾರತ ದೇಶವು ಸರ್ವಧರ್ಮೀಯರ ರಾಷ್ಟ್ರ, ಹಲವಾರು ಭಾಷೆ, ಧರ್ಮ, ಜಾತಿ, ಪಂಗಡಗಳಿಂದ ಕೂಡಿದ್ದು ಧರ್ಮ, ದೇವರು ನಂಬಿಕೆಗಳಂತಹ ಪರಿಕಲ್ಪನೆಗಳಿಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಇಂತಹ ಪರಿಕಲ್ಪನೆಗಳಲ್ಲಿ ಮದುವೆ ಎಂಬುದು ಮಾನವನ ಬದುಕಿನ ಮಹತ್ವಪೂರ್ಣವಾದ ಕ್ಷಣಗಳಲ್ಲಿ ಒಂದು. ಆದ್ದರಿಂದಲೇ ಭಾರತೀಯ ಸನಾತನ ಧರ್ಮವು ಮದುವೆಯನ್ನು "ಬ್ರಹ್ಮಗಂಟು", ಅದು ಸ್ವರ್ಗದಲ್ಲಿಯೇ ನಿರ್ಧಾರವಾಗಿರುತ್ತದೆ ಎಂದು ಸಾರಿದೆ. ಭಾರತೀಯರ ಪಾಲಿಗಂತೂ ಈ ಮದುವೆ ಗಂಡು ಹೆಣ್ಣಿನ ಸಂಬಂಧಗಳನ್ನು ಬೆಸೆಯುವ ಜನ್ಮ ಜನ್ಮದ ಅನುಬಂಧವೆಂದು ಇದೊಂದು ಪವಿತ್ರ ಬಂಧನವೆಂದೂ ನಂಬಿ ಬದುಕನ್ನು ನಡೆಸಿಕೊಂಡು ಬಂದಿದ್ದಾರೆ. ಮದುವೆಯನ್ನು "ಋಣಾನುಬಂಧ" ವೆಂಬ ಧೈವಿಕ ಮಹತ್ವವನ್ನು ನೀಡಿ, ಧರ್ಮಾರ್ಥಕಾಮಮೊಕ್ಷಗಳೆಂಬ ಪುರುಷಾರ್ಥಗಳ ಕಲ್ಪನೆಯನ್ನು ಸೃಷ್ಠಿಸಿಕೊಂಡು ಗಂಡು ಹೆಣ್ಣುಗಳ ವಿವಾಹದ ಮೂಲಕ ಜೊತೆಯಾಗಿ ಪುರುಷಾರ್ಥಗಳನ್ನು ಅನುಭವಿಸಲು ಅವಕಾಶ ಮಾಡಿಕೊಟ್ಟಿದ್ದಾರೆ.

ಆದ್ದರಿಂದ ಜನಿಸಿದ ಯಾವುದೇ ಮಾನವ ಜೀವಿಯು ಮದುವೆಯಾಗುವುದರಿಂದ ಮೊಕ್ಷಸಾಧಿಸುವನು ಎಂಬ ಮನುಧರ್ಮ ಶಾಸ್ತ್ರದ ವಾಣಿಯಂತೆ ಮದುವೆಗೆ ಹೆಚ್ಚು ಮಹತ್ವಕೊಡುತ್ತಾ ಬಂದಿದ್ದಾನೆ. ಬಂಧು ಬಾಂಧವರ ಸಮ್ಮುಖ ದಲ್ಲಿ ಸಡಗರ ಸಂಭ್ರಮಗಳಿಂದ ದೇವತೆಗಳ ಸಾಕ್ಷೀರೂಪವಾಗಿ ದಾಂಪತ್ಯ ಜೀವನಕ್ಕೆ ಹೆಜ್ಜೆ ಇಡುವ ಗಂಡು ಹೆಣ್ಣುಗಳು ಸಪ್ತಪದಿಯನ್ನು ತುಳಿದು ಕಷ್ಟ ಸುಖಗಳಲ್ಲಿ ಸಮಾನ ಪಾಲುದಾರರಾಗಿ ಜೀವನ ಸಾಗಿಸುತ್ತಾರೆ.

ಕರ್ನಾಟಕದಲ್ಲಿ ಪ್ರಮುಖವಾದ ಜಾತಿಗಳಲ್ಲಿ ಒಕ್ಕಲಿಗ ಜಾತಿಯೂ ಒಂದು, ಇದರಲ್ಲಿ ಸುಮಾರು ಅರವತ್ತೆರಡಕ್ಕೂ ಹೆಚ್ಚು ಒಳಪಂಗಡಗಳಿವೆಯೆಂದು ಡಾ// ನಲ್ಲೂರ್ ಪ್ರಸಾದ್ ರವರು ತಮ್ಮ ಸಂಶೋಧನಾ ಪ್ರಬಂಧದಲ್ಲಿ ತಿಳಿಸಿದ್ದಾರೆ. ಅವುಗಳು ಈ ಕೆಳಕಂಡಂತಿವೆ.[1]

1. ಗಂಗಟಿಕಾರ
2. ರೆಡ್ಡಿ
3. ನೊಣಬ
4. ಸೆಟ್ಟಿಗಾರ
5. ಮಲೆಗೌಡ
6. ಸ್ವಲ್ಪ
7. ಅರಮೇದಿಗ
8. ಮಾಣಗ
9. ಅಂಗಲಿಕ
10. ಬೊಗ್ಗರು
11. ಕುತಲಿ
12. ಸಿಂಗರು
13. ಕಾಕಿನಾಟ
14. ಮಡ್ಡರು
15. ದಾಸವಂಟಿಕೆ
16. ಗಂಪಲ
17. ಕಪವಳ್ಳಿ
18. ಗಂಗಿ
19. ದೇವನ ಮಕ್ಕಳು
20. ಒಕ್ಕಲಿಗ ರೆಡ್ಡಿ
21. ಹಾಲು ಒಕ್ಕಲಿಗ
22. ಮರಸು
23. ಕುಂಚಿಟಿಗ
24. ಸರ್ಪ

25. ಏಳಯ ಮನೆ

26. ಉಪ್ಪಿನ ಕೊಳಗ

27. ಮೋಪಾಟು

28. ಅಜಮಾರ

29. ನಾಮಧಾರಿ

30. ಕುಳಿಬೆಡಗ

31. ನಾಡವಾರು

32. ರಾಜಪೂ

33. ಏಳನಾಟೆ

34. ಎತ್ತನ ಕುಂಚಿಟಿಗ

35. ಮೊಗ್ಗದವರು

36. ದೊಡ್ಡಗಾಂಟ

37. ಕಮ್ಮೇರು

38. ಶಂಕ ಜಾತಿ

39. ಹಳೇ ವಕ್ಕಲು

40. ಸಮುದ್ರಕುಲ

41. ಬೆಳ್ಳಿವಕ್ಕಲಿಗ

42. ಕಾಮ ಒಕ್ಕಲು

43. ಮುಸುಕು

44. ಹಳ್ಳಿಕಾರ

45. ಚೋಳ

46. ಭಂಟರು

47. ಹೇಮ ರೆಡ್ಡಿ

48. ಜೋತ್ತದವರು

49. ಮಾಳವ

50. ತುಳುವ

51. ಪಾಂಡರು

52. ಬಂಡೇರು

53. ಅನುಮ

54. ಕೋದಾಟು

55. ತಂಡಗೌಡ

56. ಹೊಕಾವರು

57. ಆಲಮಟ್ಟಿ

58. ಗೋಸಂಗಿ

59. ಸಣ್ಣ ಗೊಂಡಿ

60. ವಾಲಿಗೂಡ

61. ಕಮ್ಮನಾಡು

62. ಗೌಂಡರು

ಮೇಲೆ ತಿಳಿಸಿದ ಕರ್ನಾಟಕದ ಒಕ್ಕಲಿಗರ ಒಳಪಲಗಡದಲ್ಲಿ ಕುಂಚಿಟಿಗರು ಒಂದು ಪ್ರಮುಖ ಒಳಪಂಗಡದವರಾಗಿರುತ್ತಾರೆ. ಇವರು ಕರ್ನಾಟಕವಷ್ಟೇ ಅಲ್ಲ ಭಾರತದ ಇತರ ರಾಜ್ಯಗಳಲ್ಲಿ ವಾಸಿಸುತ್ತಿದ್ದಾರೆ. ಪ್ರಮುಖ ವಾಗಿ ಬೆಂಗಳೂರುನಗರ, ಬೆಂಗಳೂರು ಗ್ರಾಮಾಂತರ, ರಾಮನಗರ ಮಂಡ್ಯ, ಮೈಸೂರು. ಚಾಮರಾಜನಗರ, ಹಾಸನ, ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬಳ್ಳಾರಿ, ಉತ್ತರ ಕನ್ನಡ, ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು ಜಿಲ್ಲೆಗಳಲ್ಲದೆ, ದೆಹಲಿ, ದೇವಗಿರಿ, ನಾಗಪುರ, ಪೂನ, ತಮಿಳುನಾಡಿನ ಕೊಯಮತ್ತೂರು ವೀರಕೇರಳಂ, ಮಧುರೈ, ಊಟಿ, ಪೆರಿಯಾಕುಲೇಸ್, ದಿಂಡಿಗಲ್ ಕೊಡೈಕೆನಾಲ್, ಪಳಿನಿ, ಕಂಚಿ, ಆಂಧ್ರ ಪ್ರದೇಶದ ಅನಂತಪುರ, ಹಿಂದೂಪುರ, ಕಡಪ, ಕರ್ನೂಲ್, ಚಿತ್ತೂರು, ವಾರಂಗಲ್, ಕದರಿ, ಪೆನುಕೊಂಡ ಮುಂತಾದ ಸ್ಥಳಗಳಲ್ಲಿ ಹರಡಿಕೊಂಡಿದ್ದಾರೆ ಎಂದು ತಿಳಿದು ಬರುತ್ತದೆ.

ಹೀಗೆ ಒಕ್ಕಲಿಗರಲ್ಲಿ ಒಂದು ಪ್ರಬಲ ಒಳ ಪಂಗಡವಾದ ಕುಂಚಿಟಿಗರಲ್ಲಿ ಹದಿನಾರು ಗುಂಪಿನ ಒಟ್ಟು ನಲವತ್ತೆಂಟು ಒಳಪಂಗಡ (ಬೆಡಗು) ಗಳನ್ನು ಗುರುತಿಸಲಾಗಿದೆ. ಅವುಗಳು ಈ ಕೆಳಗಿನಂತಿವೆ.

1. ಅರಸನವರು
2. ಉಂಡೇನವರು
3. ಜಾನುಕಲ್ಲಿನವರು
4. ಅಟ್ಟೇನವರು
5. ಜಲದೇನವರು

6. ರಾಗೇನವರು
7. ಹಾವಿನವರು
8. ಅಳುವನವರು
9. ಕರಡೇನವರು
10. ಧಾನ್ಯದವರು
11. ಎರಡು ಕೆರೆಯವರು
12. ಸೂರೇನವರು
13. ಹಾಲೇನವರು
14. ಬಸಲೇನವರು
15. ಎಮ್ಮೆನವರು
16. ಯರ್ರೇನವರು
17. ಹುಳಿಯಾರರು
18. ಅಂಡೇನವರು
19. ಕಣಾರದವರು
20. ಜೀರಿಗೆನವರು
21. ಬೆಳ್ಳೆನವರು
22. ಕಾಗೇನವರು
23. ಮಾಣಸೀನವರು
24. ವನುಮನವರು
25. ಕಂಬಳಿಯವರು
26. ಮಾಯಿನವರು
27. ಎಲೆಯನವರು
28. ಅರಳೇನವರು
29. ಕರಿಯೇನವರು
30. ಸಾರಂಗದವರು
31. ಗುಡಿಯವರು
32. ರಾವುತದವರು
33. ಹುತ್ತದವರು

34. ಗಾಳೇನವರು

35. ಜರಿಯವರು

36. ಬಡುವನವರು

37. ಅಷ್ಣೇನವರು

38. ದಸಲೇನವರು

39. ವುಳ್ಳೇನವರು

40. ಅಲ್ಪೇನವರು

41. ಗೋಣೇನವರು

42. ಶಟ್ಟೇನವರು

43. ದಮಗುತ್ತಿಯವರು

44. ಸಹಸ್ರದವರು

45. ಕಕ್ಕೇನವರು

46. ಕೊಗ್ಗೇನವರು

47. ಮಿಸ್ಲೇನವರು

48. ಒಳಕಲ್ಲಿನವರು.

ಹೀಗೆ ಕುಂಚಿಟಿಗ ಜನಾಂಗವನ್ನು ಮೇಲ್ಕಂಡಂತೆ 48 ಗೊತ್ರ ಬೆಡಗುಗಳನ್ನಾಗಿ ವಿಂಗಡಿಸಲಾಗಿದೆ. ಈ ವಿಂಗಡಣೆಯು ಕುಂಚಿಟಿಗ ಜನಾಂಗದ ಅನುಕೂಲದ ದೃಷ್ಠಿಯಿಂದ ಮಾಡಲಾಗಿದೆ. ಜಾತಿಯು "ಎಂಡೊಗಮಸ್" ಗುಂಪಾದುದರಿಂದ ಒಂದು ಜಾತಿಯವರು ತಮ್ಮ ಜಾತಿಯ ಒಳಗಡೆಯೇ ಮದುವೆ ಅಗಬೇಕೆಂಬ ಒಂದು ಕಟ್ಟಳೆ ಇದೆ. ಅದೇ ರೀತಿ ಕುಂಚಿಟಿಗರಲ್ಲೂ ಈ ಕಟ್ಟಳೆ ಇರುವುದರಿಂದ ವಿವಾಹ ನಿಶ್ಚಯಿಸಲು ಕುಲ, ಗೊತ್ರ, ಬೆಡಗುಗಳು ಸಹಾಯವಾಗುತ್ತವೆ. ಈ ಬೆಡಗುಗಳ ವಿಂಗಡಣೆಯಲ್ಲಿ ವೈಜ್ಞಾನಿಕ ದೃಷ್ಠಿಯನ್ನು ಕಾಣಬಹುದು. ಮನುಷ್ಯ ಕುಲದ ಅಭಿವೃದ್ಧಿಯಲ್ಲಿ ಒಂದೇ ಮಾದರಿಯ ರಕ್ತದ ಗುಂಪು ಅನಿಷ್ಠವೆಂದೂ ಅದರಿಂದ ತೊಂದರೆಗಳು ಉಂಟಾಗುತ್ತವೆಂದೂ ಅದ ಕಾರಣ ಬೇರೆ ಬೇರೆ ಕುಲದ ರಕ್ತದ ಮಿಶ್ರಣ ಕುಲದ ಅಭಿವೃದ್ಧಿಗೆ ಪೂರಕವೆಂದು ಈ ರೀತಿ ವಿಂಗಡಿಸಲಾಗಿದೆ. ಈ ಸಿದ್ದಾಂತವನ್ನು ಗಮನದಲ್ಲಿಟ್ಟುಕೊಂಡು ಒಂದೇ ಪಂಗಡವಾದರೂ ಕುಂಚಿಟಿಗರಲ್ಲಿ ಈ ಕೆಳಕಂಡ ಕುಲ, ಗೋತ್ರ, ಬೆಡಗುಗಳಾಗಿ ವಿಂಗಡಿಸಿ ಅವುಗಳಲ್ಲಿ ಕೆಲವೊಂದು ಬೆಡಗುಗಳನ್ನು ಸ್ವಗೊತ್ರ ಗುಂಪುಗಳನ್ನಾಗಿ ವಿಂಗಡಣೆ ಮಾಡಿದ್ದಾರೆ.

| ಕ್ರಮ.ಸಂಖ್ಯೆ | ಗೋತ್ರಗಳು | ದಾಯಾದಿ ಸಂಬಂಧಗಳು |
|---|---|---|
| 1 | ಉಂಡೇನವರು | ಈ ಮೂರು ಗೋತ್ರವದರಿಗೆ ಕಂಬಳಿಯವರು |

| 2 | ಜಾನುಕಲ್ಲಿನವರು | ಅಣ್ಣ ತಮ್ಮಗಳಂತೆ ಭಾವಿಸತಕ್ಕದ್ದು |
|---|---|---|
| 3 | ಅರಸನವರು | |
| 4 | ಜಲದೇನವರು | ಈ ನಾಲ್ಕು ಗೋತ್ರದವರಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 5 | ಹಾವಿನವರು | |
| 6 | ರಾಗೇನವರು | |
| 7 | ಅಟ್ಟೇನವರು | |
| 8 | ದಾನ್ಯದವರು | ಈ ಮೂರು ಗೋತ್ರದವರಿಗೆ ವನುಮನವರು ಅಣ್ಣತಮ್ಮಗಳಂತೆ ಭಾವಿಸತಕ್ಕದು |
| 9 | ಅಳುವನವರು | |
| 10 | ಕರಡೇನವರು | |
| 11 | ಎರಡು ಕೆರೆಯವರು | ಈ ಗೊತ್ರದವರಿಗೆ ಗುಡಿಯವರು ರಾವುತದವರು ಅಣ್ಣ ತಮ್ಮಗಳಂತೆ ಭಾವಿಸತಕ್ಕದ್ದು |
| 12 | ಹಾಲೇನವರು | |
| 13 | ಸೊರೇನವರು | |
| 14 | ಬಸಲೇನವರು | ಈ ನಾಲ್ಕು ಗೋತ್ರದವರಿಗೆ ಅಂಡೇನವರು ಅಣ್ಣತಮ್ಮಗಳಂತೆ ಭಾವಿಸತಕ್ಕದ್ದು |
| 15 | ಯಮ್ಮೇನವರು | |
| 16 | ಹುಳಿಯಾರರು | |
| 17 | ಯರ್ರೇನವರು | |
| 18 | ಶೆಟ್ಟೇನವರು | ಈ ಮೂರು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 19 | ಗೂಣೇನವರು | |
| 20 | ಅಲ್ವೇನವರು | |
| 21 | ಬೆಳೇನವರು | ಈ ನಾಲ್ಕು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 22 | ಅಂಡೇನವರು | |
| 23 | ಜೀರೀಗೆನವರು | |
| 24 | ಕಠಾರದವರು | |
| 25 | ವನಮನವರು | ಈ ಮೂರು ಗೋತ್ರದವರಿಗೆ ಅಳುವನವರು ಅಣ್ಣ ತಮ್ಮಗಳಂತೆ ಭಾವಿಸತಕ್ಕದ್ದು |
| 26 | ಕಾಗೇನವರು | |
| 27 | ಮಾಣಸೇನವರು | |

| 28 | ಕಂಬಳಿಯವರು | ಈ ನಾಲ್ಕು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ. |
|---|---|---|
| 29 | ರೊದ್ದದವರು | |
| 30 | ಯಲೆಯವರು | |
| 31 | ಮಾಯಿನವರು | |
| 32 | ಕರಡೇನವರು | ಈ ಮೂರು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 33 | ಕರಿಕೇನವರು | |
| 34 | ಸಾರಂಗದವರು | |
| 35 | ರಾವುತದವರು | ಈ ಮೂರು ಗೋತ್ರದವರಿಗೆ ಎರಡು ಕೆರೆಯವರು ಅಣ್ಣ ತಮ್ಮಂದಿರಂತೆ ಭಾವಿಸತಕ್ಕದ್ದು |
| 36 | ಹುತ್ತದವರು | |
| 37 | ಗುಡಿಯವರು | |
| 38 | ಜರಿಯವರು | ಈ ಮೂರು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 39 | ಗಾಳೇನವರು | |
| 40 | ಬಡುವನವರು | |
| 41 | ದಸಲೇನವರು | ಈ ಮೂರು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 42 | ವುಳ್ಳೇನವರು | |
| 43 | ಅಟ್ಟೇನವರು | |
| 44 | ಸಹಸ್ರದವರು | ಈ ಎರಡೂ ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ. |
| 45 | ದಮಗುತ್ತಿಯವರು | |
| 46 | ಕೊಗ್ಗೇನವರು | ಈ ಎರಡು ಗೋತ್ರಗಳಿಗೆ ಅಣ್ಣ ತಮ್ಮಗಳು ಯಾರು ಇಲ್ಲ |
| 47 | ಕಕ್ಕೇನವರು | |
| 48 | ಒಳಕಲ್ಲುನವರು | ಈ ಗೋತ್ರಕ್ಕೆ ಅಣ್ಣ ತಮ್ಮಗಳು ಯಾರು ಇಲ್ಲ [2] |

ಈ ರೀತಿಯ ಕುಲ, ಗೋತ್ರ, ಬೆಡಗುಗಳನ್ನು ವಿವಾಹ ಸಮಯದಲ್ಲಿ ಎಲ್ಲರೂ ತಪ್ಪದೇ ಪಾಲಿಸುತ್ತಾ ವಿವಾಹಗಳನ್ನು ಮಾಡುತ್ತಾರೆ. ಪ್ರತಿಯೊಂದು ಗುಂಪಿನ ಜನರು ಅವರ ಅಣ್ಣ ತಮ್ಮಂದಿರ ಬೆಡಗುಗಳನ್ನು ಅನುಸರಿಸಿ ಅಣ್ಣ ತಮ್ಮಂದಿರೆಂದು ಪರಿಗಣಿಸುತ್ತಾರೆ. ಈ ರೀತಿ ಪ್ರತೀ ಗುಂಪಿನವರು ಅವರ ದಾಯಾದಿಗಳ ಬೆಡಗುಗಳನ್ನು ಪರಿಗಣಿಸಿ ವಧೂ ವರರಾಗುವುದನ್ನು ನಿಷೇಧಿಸಲಾಗಿದೆ.

ಪ್ರತಿಯೊಂದು ಧರ್ಮೀಯರಲ್ಲಿ ಮದುವೆ ಸಂಪ್ರದಾಯಗಳು ನಡೆಯುತ್ತವೆ. ಭಿನ್ನ ಭಿನ್ನ ಜನಾಂಗದವರಲ್ಲಿ ಭಿನ್ನ ರೀತಿಯ ಆಚರಣೆಗಳು, ಸಂಪ್ರದಾಯಗಳನ್ನು ಕಾಣಬಹುದು ಉದಾ:- ಕ್ರೈಸ್ತರಲ್ಲೂ ಹಾಗೂ ಮುಸ್ಲೀಮರಲ್ಲೂ ಒಂದೇ ರೀತಿಯ ಮದುವೆ ಸಂಪ್ರದಾಯಗಳನ್ನು ಕಾಣಬಹುದು. ಕೆಲವೊಮ್ಮೆ ಒಂದೇ ಜಾತಿಯ ಒಳಪಂಗಡಗಳಲ್ಲಿ ಭಿನ್ನ ಆಚರಣೆಗಳನ್ನು ಕಾಣಬಹುದು. ಅದೇ ರೀತಿ ಕುಂಚಿಟಿಗ ಒಕ್ಕಲಿಗರಲ್ಲಿ ತಮ್ಮದೇ ಆದ ವಿಶಿಷ್ಠ ವಿವಾಹ ಪದ್ಧತಿಯು ಅನೇಕ ಶಪಮಾನಗಳಿಂದ ನಡೆದು ಬಂದಿದೆ. ಅದರೆ ಇತ್ತೀಚಿನ ದಿನಗಳಲ್ಲಿ ಕಾಲದ ಓಟ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ಪ್ರಭಾವ ಹಾಗೂ ಆಧುನೀಕರಣದ ಭರಾಟೆಯಲ್ಲಿ ಬಹಳಷ್ಟು ಸಂಪ್ರದಾಯಗಳನ್ನು ಕೈ ಬಿಡಲಾಗಿದೆ. ಹಿಂದೆ ಕುಂಚಿಟಿಗರ ಮದುವೆಗಳು ಒಂಭತ್ತು ದಿನಗಳು ನಡೆಯುತ್ತಿದ್ದು, ಕಾಲಕ್ರಮೇಣ ಐದು ದಿನ ನಂತರ ಮೂರು ದಿನಗಳಿಗೆ ಮಿತಿಗೊಂಡು, ತೀರಾ ಇತ್ತೀಚಿಗೆ ಅಧುನಿಕತೆಯ ಕಲ್ಯಾಣ ಮಂಡಪಗಳ ಪ್ರಭಾವ/ಸಂಸ್ಕೃತಿ ಬಂದಮೇಲೆ ಕೇವಲ ಎರಡು ದಿನಕ್ಕೆ ಸೀಮಿತಗೊಂಡವು ಅಂದರೆ ಒಂದು ದಿನ ಅರಿಶಿಣದ ಶಾಸ್ತ್ರ/ ಪ್ರಥಮ ಶಾಸ್ತ್ರ ಮತ್ತೊಂದು ದಿನ ಧಾರೆ ಮುಹೂರ್ತಕ್ಕೆ ಸಿಮಿತಗೊಂಡು ವಿವಾಹಗಳು ಮುಗಿಯುದನ್ನು ಗಮನಿಸಬಹುದಾಗಿದೆ.

ಈ ಆಚರಣೆಗಳು ಸಾಮಾನ್ಯವಾಗಿ ವಿವಾಹ ಪೂರ್ವ ಮತ್ತು ನಂತರ ಆಚರಣೆಗಳು ಎಂಬುದಾಗಿ ವಿಂಗಡಿಸಬಹುದು. ವಿವಾಹ ಪೂರ್ವದ ಆಚರಣೆಗಳೆಂದರೆ ಹೆಣ್ಣು/ ವಧುವಿನ ಅನ್ವೇಷಣೆಯಿಂದ ಹಿಡಿದು ವಿವಾಹದವರೆಗೆ ಅನೇಕ ಸಂಪ್ರದಾಯಗಳನ್ನು ಕುಂಚಿಟಿಗ ಜನಾಂಗದಲ್ಲಿ ಕಾಣಬಹುದು.

**ಹೆಣ್ಣಿನ ಅನ್ವೇಷಣೆ:**

ಸಾಮಾನ್ಯವಾಗಿ ಹಿಂದೆ ವಯಸ್ಕ ವರನಿಗೆ ಸೋದರ ಮಾವ ಅಥವಾ ಸೋದರತ್ತೆಯ ಮಗಳನ್ನು ಹುಟ್ಟಿದಾಗಲೇ ತಮ್ಮ ಮಗನಿಗೆ ತಂದುಕೊಳ್ಳುವುದೆಂದು ನಿರ್ಧರಿಸುತ್ತಿದ್ದರು. ಕಾಲ ಬದಲಾದಂತೆ ಹೊಸ ಸಂಬಂಧಗಳಲ್ಲಿನ ಹೆಣ್ಣನ್ನು ತರಲು ಅನ್ವೇಷಣೆಯಲ್ಲಿ ತೊಡಗಿದರು. ಇಂತ ಸಂದರ್ಭದಲ್ಲಿ ತಮ್ಮ ಪರಿಚಯಸ್ಥರ, ಬಂಧುಗಳ ಮೂಲಕ ಹೆಣ್ಣಿರುವ ಮನೆಯನ್ನು ಕೇಳಿ ತಿಳಿದುಕೊಂಡು ತಮ್ಮ ಮನೆತನ ಮತ್ತು ಅಂತಸ್ತಿಗೆ ಯೋಗ್ಯವಾದ ವಧುವನ್ನು ಗುರುತಿಸಿ ಹೆಣ್ಣು ನೋಡಲು ತೆರಳುತ್ತಾರೆ. ಹೆಣ್ಣು ನೋಡುವುದೆಂದರೆ ಸುಲಭದ ಕೆಲಸವಾಗಿರಲಿಲ್ಲ. "ಜಲನೋಡಿ ಭಾವಿ ತೋಡು, ಗುಣನೋಡಿ ಹೆಣ್ಣು ತಾ" ಎಂಬ ಗಾದೆಯಂತೆ ಏಳು ಜೊತೆ ಜೋಡು ಸವೆಸಿ ಹೆಣ್ಣನ್ನು ಹುಡುಕುವಂತ ಮಾತುಗಳು ಕೇಳಿಬರುತ್ತಿದಾವು. ಸಾಮಾನ್ಯವಾಗಿ "ಬಡವರ ಮನೆ ಹೆಣ್ಣು ತಾ. ಶ್ರೀಮಂತರ ಮನೆಗೆ ಹೆಣ್ಣುಕೊಡು" ಎಂಬ ಮಾತು ಪ್ರಚಲಿತದಲ್ಲಿತ್ತು. ಹೆಣ್ಣು ಕೊಡುವಾಗ ಗಂಡಿನ ಮನೆಯ ತುಂಬಾ ಧಾನ್ಯದ ಮೂಟೆಗಳು, ಹಾಗೂ ಮನೆ ತುಂಬಾ ಹಸುಗಳಿದಾರೆ ಸಮೃದ್ಧ ಕುಟುಂಬವೆಂಬ ದೃಷ್ಠಿಯಿಂದ ಹೆಣ್ಣನ್ನು ಕೊಡುತ್ತಿದ್ದರು. ಹಾಗೆಯೇ ಬಡವರ ಮನೆಯ ಹೆಣ್ಣನ್ನು ತಂದರೆ ತಗ್ಗಿ ಬಗ್ಗಿನಡೆದು ಮನೆತನದ ಗೌರವ ಕಾಪಾಡುವಳೆಂಬ ಮಾತು ಹಿಂದೆ ರೂಢಿಯಲ್ಲಿತ್ತು.

ಕೆಲವೊಮ್ಮೆ ಮಧ್ಯವರ್ತಿಗಳು ಅಥವಾ ಸಂಬಂಧಿಕರ ಜೊತೆ ಯೋಗ್ಯಳಾದ ವಧುವಿನ ಮನೆಗೆ ಶುಭ ಶಕುನ ನೋಡಿ ಹೊರಡುತ್ತಾರೆ. ಪುರೋಹಿತರಿಗೆ ತಾಂಬೂಲ ಮತ್ತು ದಕ್ಷಿಣೆಯನ್ನು ನೀಡಿ ಗಳಿಗೆ, ದಿನಗಳನ್ನು ತಿಳಿದು ಹೊರಡುವ ಸಂಪ್ರಾದಾಯವುಂಟು. ಹಾಗೆ ಬೆಡಗು ಮತ್ತು ಗೋತ್ರಗಳನ್ನು ಗಮನದಲ್ಲಿಟ್ಟುಕೊಂಡು ಹೆಣ್ಣನ್ನು ನೋಡಲು ಹೊರಡುವವರು ಒಂದೇ ಬೆಡಗಿನ ಅಂದರೆ ತಂದೆಯ ಕುಲಗಳು ತಾಯಿಯ ಕುಲಗಳು ಒಂದೇ ಆಗಿದ್ದಲ್ಲಿ ಅಂತಹವರ ಜೊತೆ ಸಂಬಂಧವನ್ನು ಬೆಳೆಸುತ್ತಿರಲಿಲ್ಲ. ಹೆಣ್ಣನ್ನು ನೋಡುವ ಮೊದಲೆ ಅವರಿಗೆ ಸುದ್ದಿ ಮುಟ್ಟಿಸಿ 5 ಅಥವಾ 9 ಜನ ಹಿರಿಯರು ಗಂಡಿನ ಮನೆಯಿಂದ ಹೊರಟು ಹೆಣ್ಣಿನಮನೆಗೆ ತೆರಳುತ್ತಾರೆ. ಹೀಗೆ ಹೊರಡುವಾಗ ಮನೆಯಲ್ಲಿ ಮೈಲಿಗೆಯಾಗಲಿ, ದಾರಿಯಲ್ಲಿ ಅಪಶಕುನಗಳಾಗದಂತೆ ಎಚ್ಚರ ವಹಿಸುತ್ತಾರೆ. ಮನೆಯಿಂದ ಹೊರಡುವಾಗ ಮಡಿಕೆ ಹೊಡೆಯುವುದು, ದೀಪ ಆರುವುದು ಸೌದೆ ಹೊರ, ಕಸದ ಬುಟ್ಟಿ ವಿಧವೆಯರು ಬಲದಿಂದ ಎಡಕ್ಕೆ ಹೋಗುವುದು ಕ್ಷೌರಿಕ, ಹಾವು, ಖಾಲಿಕೊಡ ಒಂಟಿ ಬ್ರಾಹ್ಮಣ ಅಡ್ಡ ಅಥವಾ ಎದುರು ಬಂದರೆ ಅಪಶಕುನವೆಂದು ಭಾವಿಸಿ ಪ್ರಯಾಣನಿಲ್ಲಿಸುತ್ತಾರೆ.

ಒಂದು ವೇಳೆ ಹೊರಡುವ ಕಾಲದಲಿ ಕಾಗೆಯು ಎಡದಿಂದ ಬಲಕ್ಕೆ ಹಾರುವುದು. ಬಳೆ ಮಲ್ಹಾರ, ಹೂವು, ಮುತ್ತೈದೆ, ಮಂಗಳವಾದ್ಯಗಳು, ಹಣ್ಣಿನ ತಟ್ಟೆ, ಜಾಗಟೆ ಹಿಡಿದ ದಾಸಯ್ಯ ತುಂಬಿದ ಕೊಡ, ಶುಭ ಮೂಲೆಯಲ್ಲಿ ಹಲ್ಲಿ ಲೊಚಗುಟ್ಟುವುದು ನಡೆದರೆ ಶುಭವೆಂದು ಪರಿಗಣಿಸಿ ಪ್ರಯಾಣ ಮಾಡುತ್ತಾರೆ. ಹೀಗೆ ಹೋಗಿ ಬಂದಮೇಲೆ ಯಾರು ಹೆಣ್ಣು ಅಥವಾ ಗಂಡಿನ ಮನೆಗಳಲ್ಲಿ ಅಪಶಕುನಗಳು ಸಾವು ನೋವುಗಳು ಸಂಭವಿಸಿದಲ್ಲಿ ಆ ಸಂಬಂಧವನ್ನು ಮುರಿದು ಹೊಸ ಸಂಬಂಧಗಳ ಹುಡುಕಾಟದಲ್ಲಿ ತೊಡುಗುತ್ತಾರೆ.

**ಮನೆ ನೊಡುವ ಶಾಸ್ತ್ರ:**

ಈ ರೀತಿ ಒಂದೆರಡು ಸಾರಿ ಹೆಣ್ಣಿನ ಮನೆಗೆ ಗಂಡಿನವರು, ಗಂಡಿನ ಮನೆಗೆ ಹೆಣ್ಣಿನವರು ಬಂದು ಹೋದ ಮೇಲೆ, ಗಂಡಿನ ಕಡೆಯವರು ಹೆಣ್ಣಿನ, ಗುಣ ನಡತೆ, ಆಕೆಯ ತಾಯಿ ಅವಳ ಅಕ್ಕ ತಂಗಿಯರ, ಸಾಲು ಮೂಲೆಗಳನ್ನು ಸೂಕ್ಷ್ಮವಾಗಿ ತಿಳಿದ ಮೇಲೆ ಮನೆ ನೋಡಲು ಹೊರಡುವರು. ಹೊರಡುವ ಮುನ್ನ ಮನೆಯಲ್ಲಿ ನೆಲೆ ದೀವಿಗೆಯನ್ನು ಹಚ್ಚಿ ಪೂಜಿಸಿ, ಕೈ ಮುಗಿದು ಎಲೆ, ಅಡಿಕೆ, ಹೂವುಗಳನ್ನು ತೆಗೆದುಕೊಂಡು ಮೂರು ಅಥವಾ ಐದು ಮಂದಿ ಹಿರಿಯರು ಹೋಗುತ್ತಾರೆ. ಆದಿನ ಆ ಮನೆಗಳಲ್ಲಿ ಯಾರೇ ಅಗಲಿ ಮುಟ್ಟು ಅಥವಾ ಇನ್ನಿತರ ಮೈಲಿಗೆಗಳಾದರೆ ಸಂಬಂಧವನ್ನು ನಿಲ್ಲಿಸುತ್ತಾರೆ. ಹೀಗೆ ತಾಂಬೂಲ ಸಮೇತರಾಗಿ ಬಂದ ಗಂಡಿನ ಮನೆಯವರಿಗೆ ಯೋಗ್ಯತಾನುಸಾರ ಉಪಚರಸಿ, ಸಿಹಿತಿಂಡಿ ಮಾಡಿ ಬಡಿಸುತ್ತಾರೆ. ಹೀಗೆ ಒಂದೆರಡು ಭಾರಿ ಗಂಡಿನ ಮನೆಯವರು ಹೆಣ್ಣಿನ ಮನೆಗೂ, ಹೆಣ್ಣಿನ ಮನೆಯವರು ಗಂಡಿನ ಮನೆಗೆ ಹೋಗಿ ಬಂದು ಶಕುನಗಳೆಲ್ಲ ಸರಿ ಬಂದ ಮೇಲೆ ಮುಂದೆ ಸಾಲಾವಳಿಯನ್ನು ನೋಡ ಬಯಸುತ್ತಾರೆ.

**ಸಾಲಾವಳಿ ನೋಡು/ಕೇಳುವುದು:**

ಸಾಲವಳಿ ಎಂದರೆ ಎರಡು ಮನೆಯರಿಗೂ ಸಂಬಂಧಗಳು ಒಪ್ಪಿಗೆಯಾದ ನಂತರ ಸಂಖ್ಯಾಶಾಸ್ತ್ರ / ಪಂಚಾಂಗದ ಪ್ರಕಾರ ಪುರೋಹಿತರಲ್ಲಿಗೆ ತೆರಳಿ ಗ್ರಹ ತಾರೆಗಳ ಬಗ್ಗೆ ತಿಳಿದುಕೊಳ್ಳುವ ಶಾಸ್ತ್ರವಾಗಿದೆ. ಗಣಕೂಟ, ತಾರಾಬಲ, ಚಂದ್ರಬಲ, ನಾಡಿಕೂಟ, ಸಾಲಾವಳಿ, ಯೊನಿಕೂಟಗಳ ಜಾತಕ ಫಲಗಳನ್ನು ತಿಳಿದುಕೊಳ್ಳುತ್ತಾರೆ. ಒಂದೊಮ್ಮೆ ಜಾತಕವಿಲ್ಲದಿದ್ದಾಗ ನಾಮ ನಕ್ಷತ್ರಗಳ ಮೇಲೆ ಜಾತಕ ಫಲಗಳನ್ನು ತಿಳಿದುಕೊಳ್ಳುವರು. ಇಲ್ಲಿ ಯಾವುದೇ ದೋಷ ಅಂದರೆ ಕುಜ ದೋಷ, ನಾಗ ದೋಷಗಳಿದ್ದರೆ ಅವುಗಳಿಗೆಬೇಕಾದ ಶಾಂತಿಯನ್ನು ಪುರೋಹಿತರ ಮೂಲಕ ಮಾಡಿಸಿ ಪರಿಹರಿಸಿಕೊಳ್ಳುತ್ತಾರೆ. ಮಾಂಗಲ್ಯದಾರಣೆ ಅಥವಾ ವಿವಾಹಕ್ಕೆ ಅಡೆತಡೆಗಳಿದಾರೆ ಶಾಂತಿ ಮಾಡಿಸುವುದರ ಮೂಲಕ ಪರಿಹರಿಸಿಕೊಂಡು ಎಲ್ಲಾ ಗಣಕೂಟ, ಯೋನಿ ಕೂಟ, ತಾರಾಬಲ, ಗ್ರಹಬಲಗಳು ಸರಿ ಬಂದರೆ ಮಾತ್ರ, ಸಂಬಂಧವನ್ನು ಮುಂದುವರಿಸುತ್ತಾರೆ. ಈ ಜಾತಕ ಫಲವನ್ನು ಎರಡು ರೀತಿಯಲ್ಲಿ ನೋಡುತ್ತಾರೆ. ಹೆಣ್ಣು ಗಂಡುಗಳ ಕುಂಡಲಿಗಳಲ್ಲಿ ಜನ್ಮಲಗ್ನದ ಎರಡನೆಯ ಸ್ಥಾನದಲ್ಲಿ (ಮಂಗಳ ಅಥವಾ ಅನಾಚರ) ಕುಜ ಗ್ರಹ ವಿದ್ದರೆ ಜಾತಕನಿಗೆ ಕುಜದೋಷವಿದೆ ಎಂತಲೂ, ಕೇತುಗ್ರಹ ವಿದ್ದರೆ ಸರ್ಪದೋಷವೆಂತಲೂ ಅದಕ್ಕೆ ಶಾಂತಿ ಮಾಡಿಸಬೇಕೆಂದು ತಿಳಿಸುತ್ತಾರೆ. ಈ ರೀತಿ ಸಾಲಾವಳಿಯನ್ನು ಗುಣಿಸಿ ಉತ್ತಮ (ಅಂಕ) ಗುಣಗಳು ಬಂದರೆ ಶುಭವೆಂದು ತೀರ್ಮಾನಿಸುತ್ತಾರೆ. ಸಾಲಾವಳಿಯನ್ನು ಗುಣಿಸಿದಾಗ ಬರುವ ಲಬ್ಧ ಪದಗಳೇ ಗುಣಗಳು. ಕನಿಷ್ಠ 19ಕ್ಕೆ ಮೇಲ್ಪಟ್ಟ ಗುಣಗಳು ಬಂದರೆ ಶುಭವೆಂದು, 19ಕ್ಕೆ ಕಡಿಮೆ ಬಂದರೆ ಅಶುಭವೆಂದು ತಿದು ಸಂಬಂಧವನ್ನು ಕೈ ಬಿಡುವುದು ಉಂಟು ಹಾಗೂ ಪುರೋಹಿತರು ನಾಡಿ ಕೂಟವನ್ನು ನೋಡುತ್ತಾರೆ. ಗಂಡು ಹೆಣ್ಣುಗಳು ಪರಸ್ಪರ ವಿರುದ್ದ ಗಣದವರಾಗಬಾರದು. ಉದಾಃ ಹಾವು, ಮುಂಗುಸಿ, ಹುಲಿಮೇಕೆ, ಇಲಿ ಬೆಕ್ಕುಗಳಂತ ವಿರುದ್ದ ಗಣ ಬಂದರೆ ಸಂಬಧವನ್ನು ನಿಲ್ಲಿಸುತ್ತಾರೆ. ಕೆಲವೊಮ್ಮೆ ಒಂದೇ ನಾಮ ಬಲದ ಹೆಸರು ಬಂದರೆ ಮಹಾ ನಕ್ಷತ್ರವೆಂದು ತಿಳಿದು ತಾರಾ ಬಲ/ ಸಾಲಾವಳಿಯನ್ನು ನೋಡದೆಯೇ ಮದುವೆ ಮಾಡುವುದುಂಟು ಹಾಗೆ ಭರಣಿ ನಕ್ಷತ್ರದಲ್ಲಿ ಋತುಮತಿಯಾದ ಹೆಣ್ಣನ್ನು ದೋಷವೆಂದೂ, ಅದಕ್ಕೆ ಬೇಕಾದ ಶಾಂತಿಯನ್ನು ಮಾಡಿಸುವುದು ಉಂಟು. ಇನ್ನು ಕೆಲವೊಮ್ಮೆ ಮೂರು ಕುಲ/ಬೆಡಗಿನ ಮನೆಗೆ ಹೆಣ್ಣನ್ನು ಕೊಡಲು ಹಿಂದೇಟು ಹಾಕುವುದು ಉಂಟು. ಹೀಗೆ ಎಲ್ಲಾ ರೀತಿಯಿಂದಲೂ ಸಂಬಂಧ  ಸರಿಬಂದ ಮೇಲೆ ಹೆಣ್ಣನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ವೀಳ್ಯ ಶಾಸ್ತ್ರವನ್ನು ಮಾಡುತ್ತಾರೆ.

**ವೀಳ್ಯಶಾಸ್ತ್ರ/ ಅರಿಶಿಣ ಕುಂಕುಮ ಬಿಡುವುದು:**

ಹೀಗೆ ಪರಸ್ಪರ ಎರಡೂ ಕಡೆಯವರಿಗೂ ಒಪ್ಪಿಗೆ ಆದ ಮೇಲೆ ಕೊಡು ತೆಗೆದುಕೊಳ್ಳುವ ವಿಚಾರವಾಗಿ ಚರ್ಚಿಸಿ ತೀರ್ಮಾನಿಸುತ್ತಾರೆ. ಗಂಡಿನ ಮನೆಯ 9 ಅಥವಾ 11 ಜನ ಸಂಬಂಧಿಕರನ್ನು/ಕುಲಸ್ಥರನ್ನು ಒಳಗೊಂಡ ಗುಂಪು ಎಲೆ, ಅಡಿಕೆ, ಸೀರೆ, ಕಂಕಣ, ಕೊಬ್ಬರಿ, ಹೂವು ಬಾಳೆ ಹಣ್ಣು, ಬಳೆ, ಅರಿಶಿಣ ಕುಂಕುಮ ಸಮೇತರಾಗಿ ಹೆಣ್ಣಿನ ಮನೆಗೆ

ಬರುತ್ತಾರೆ. ಅಂದು ಹೆಣ್ಣಿನ ಮನೆಯವರು ಮನೆಯನ್ನು ಸಾರಿಸಿ ಗುಡಿಸಿ ಒಪ್ಪ ಓರಣ ಮಾಡಿಕೊಂಡು ವರನ ಕಡೆಯವರನ್ನು ಸ್ವಾಗತಿಸಿ ಉಪಚರಿಸುತ್ತಾರೆ. ಸಿಹಿ ತಿಂಡಿ ಮಾಡಿ ಬೀಗರಾಗುವವರನ್ನು ಸತ್ಕರಿಸಿ ಸಂತೋಷ ಪಡಿಸುತ್ತಾರೆ. ಹಿಂದೆ ಈ ವೀಳ್ಯಶಾಸ್ತ್ರದ ದಿನ ಗಂಡು ಹೆಣ್ಣಿನ ಮನೆಗೆ ಬರುತ್ತಿರಲಿಲ್ಲ. ತಮ್ಮ ತಂದೆ ತಾಯಿ, ಕುಲಸ್ಥರೆ ಈ ಶಾಸ್ತ್ರ ಮಾಡಿಕೊಂಡು ಬರುತ್ತಿದ್ದರು. ಆದರೆ ಇತೀಚಿಗೆ ಈ ವೀಳ್ಯ ಶಾಸ್ತ್ರವು ಪ್ರತಿಷ್ಠೆಯ ಕಣವಾಗಿ ಪರಿಣಮಿಸಿದೆ. ಕೆಲವೊಮ್ಮೆ ಶ್ರೀಮಂತರ ವೀಳ್ಯ ಶಾಸ್ತ್ರವು ಒಬ್ಬ ಬಡವನ ಮನೆಯ ಮದುವೆಗಿಂತ ಅದ್ದೂರಿಯಾಗಿ ನಡೆಯುತ್ತದೆ. ಇದು ನಿಶ್ಚಿತಾರ್ಥ ಎಂಬ ಪಾರಿಭಾಷಿಕ ಪದವನ್ನು ಪಡೆದು ಅದ್ದೂರಿತನ ಪಡೆದುಕೊಂಡಿದೆ. ಗಂಡಿನ ಮನೆಯವರು ಹೆಣ್ಣನ್ನು ಕೂಡಿಸಿ ಮೊಟ್ಟಮೊದಲನೆಯದಾಗಿ ಬಣ್ಣ (ಸೀರೆ ರವಿಕೆ) ಅರಿಶಿಣ ಕುಂಕುಮ, ಹೂವು, ತಾಂಬೂಲ ನೀಡಿ ಅಕ್ಷತೆಯನ್ನು ಹಾಕಿ ಹೆಣ್ಣು ತಮ್ಮದೆಂದು ಅಧಿಕೃತ ಮಾಡಿಕೊಳ್ಳುತ್ತಾರೆ. ಈ ಶಾಸ್ತ್ರ ಮುಗಿದ ಮೇಲೆ ಆ ಹೆಣ್ಣನ್ನು ಬೇರೆಯ ವರನೊಂದಿಗೆ ಮದುವೆ ಮಾಡುವಂತಿಲ್ಲ. ನಂತರ ಮುತ್ತೈದೆಯರು ಸೋಬಾನೆ ಪದಗಳನ್ನು ಹಾಡಿ ಅರಿಶಿಣ ಕುಂಕುಮ, ಹೂವು ತಾಂಬೂಲ ಪಡೆದುಕೊಳ್ಳುತ್ತಾರೆ. ಇತ್ತೀಚಿಗೆ ಪಾಶ್ಚಾತ್ಯರ ಪ್ರಭಾವದಿಂದಾಗಿ ವೀಳ್ಯ ಶಾಸ್ತ್ರದ ದಿನ ಉಂಗುರಗಳನ್ನು ತೊಡಿಸುವ ಪದ್ಧತಿಗಳು ಜಾರಿಗೆ ಬಂದಿವೆ.

**ಕನ್ಯಾ ಶುಲ್ಕ ಅಥವಾ ತೆರ (ಇಂದು ವರದಕ್ಷಿಣೆ):**

ಕುಂಚಿಟಿಗರಲ್ಲೂ ಸುಮಾರು 50-60 ವರ್ಷಗಳ ಹಿಂದೆ ಕನ್ಯಾ ಶುಲ್ಕವನ್ನು ಕೊಡುವ ಪದ್ಧತಿಯು ಜಾರಿಯಲ್ಲಿತ್ತು. ಸುಮಾರು 12 ರೂಪಾಯಿಯನ್ನು ಗಂಡಿನ ಕಡೆಯವರು ಹೆಣ್ಣಿಗೆ "ತೆರ" ದ ರೂಪದಲ್ಲಿ ಕೊಡಬೇಕಾಗಿತ್ತು. ಜೊತೆಗೆ ಮದುವೆಯ ಸಂದರ್ಭದಲ್ಲಿ ಗಂಡಿನ ತಂದೆಯು ಹೆಣ್ಣಿನ ಮನೆಗೆ ಅಡುಗೆ ಸಾಮಾನುಗಳನ್ನು, ಯೋಗ್ಯತೆಗೆ ಅನುಗುಣವಾಗಿ ಚಿನ್ನ ಬೆಳ್ಳಿಯ ಆಭರಣಗಳನ್ನು, ಬೆಲೆ ಬಾಳುವ ರೇಷ್ಮೆ ಸೀರೆ ಕುಬುಸ ಧಾರೆಗೆ ಬೇಕಾದ ಬಿಳಿಸೀರೆಗಳನ್ನು ತಂದು ಮದುವೆ ಮಾಡಿಕೊಂಡು ಹೋಗಬೇಕಾಗಿತ್ತು. ಈ "ತೆರ" ವನ್ನು ಗಂಡು ಹೆಣ್ಣಿನ ತಂದೆ ತಾಯಿ ಸೋದರ ಮಾವಂದಿರು ಹಾಗೂ ಊರಿನ ಹಿರಿಯ ಕುಲಸ್ಥರು ಕೂತು ನಿರ್ಧರಿಸುತ್ತಿದ್ದರು. ಲಗ್ನ ಕಟ್ಟಿಸುವ ಸಂದರ್ಭದಲ್ಲಿ ಗಂಡಿನ ತಂದೆಯು ಹೆಣ್ಣಿನ ತಂದೆಗೆ ಕೂಡಬೇಕಾಗಿತ್ತು. ಇದನ್ನೆ "ಕನ್ಯಾಶುಲ್ಕ" "ತೆರ" ಎಂದು ಕರೆಯುತ್ತಿದ್ದರು.

ಆದರೆ ಕಾಲಬದಲಾದಂತೆ ಕನ್ಯಾ ಶುಲ್ಕವು ಮರೆಯಾಗಿ "ವರದಕ್ಷಿಣೆ" ರೂಪದ ಒಂದು ಕೆಟ್ಟ ಪದ್ಧತಿಯು ಜಾರಿಗೆ ಬಂದು ಹೆತ್ತವರನ್ನು ಶೋಷಣೆ ಮಾಡುವ ಸಂಪ್ರಾದಾಯ ಇಂದು ಕುಂಚಿಟಿಗರಷ್ಟೇ ಅಲ್ಲದೆ ಎಲ್ಲಾ ಜಾತಿ ಜನಾಂಗಗಳಲ್ಲೂ ತಾಂಡವವಾಡುತ್ತಿದೆ. ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೆ ಎಷ್ಟೊ ವಧುಗಳು ಅವರ ತಂದೆತಾಯಿಗಳು ಈ ಕೆಟ್ಟ ಪಿಡುಗಿಗೆ ಬಲಿಯಾಗಿರುವ ನಿದರ್ಶಗಳೂ ಉಂಟು.

ಹೀಗೆ ಶಕುನಗಳು ಸರಿಬಂದು ಎರಡೂ ಕಡೆಯವರಿಗೆ ಸಂಬಂಧ ಹಾಗೂ ಮನೆತನಗಳು ಒಪ್ಪಿಗೆಯಾದ ಬಳಿಕ ಮದುವೆಯ ದಿನಾಂಕವನ್ನು ನಿಶ್ಚಯ ಮಾಡುತ್ತಾರೆ. ಆದಿನ ಹೆಣ್ಣಿನ ಮನೆಗೆ ಗಂಡಿನ ಮನೆಯವರು ಬಂದು ಮಾತುಕತೆ ನಡೆಸಿ ಮದುವೆ ನಡೆಯುವ ಸ್ಥಳ, ಸಮಯವನ್ನು ನಿಗದಿ ಮಾಡುತ್ತಾರೆ. ಎರಡೂ ಕಡೆಯವರು ತಾವು ಕೊಡಬೇಕಾದ ಒಡವೆ ವಸ್ತ್ರಗಳು, ವರದಕ್ಷಿಣೆಗಳು, ತೆರೆಗಳನ್ನು ಅವರವರ ಅಂತಸ್ತಿಗೆ ತಕ್ಕಂತೆ ನಿಗಧಿಪಡಿಸಿಕೊಳ್ಳುತ್ತಾರೆ. ಇತ್ತೀಚಿಗೆ ಅರ್ಥಿಕವಾಗಿ ಮುಂದುವರೆದ ಜನರು ಕಲ್ಯಾಣ ಮಂಟಪಗಳನ್ನು ಆಯ್ಕೆ ಮಾಡಿಕೊಂಡು ಮದುವೆ ಮಾಡುವ ಪದ್ಧತಿ ರೂಢಿಯಲ್ಲಿದೆ. ಬಡವರು, ನಿರ್ಗತಿಕರು ಸಂಪ್ರದಾಯ ಬದ್ಧವಾಗಿ, ತಮ್ಮ ಮನೆ, ದೇವಸ್ಥಾನ, ಮಠ ಮಂದಿರಗಳಲ್ಲೇ ಮದುವೆ ಮಾಡಿಕೊಡುವುದುಂಟು ಮತ್ತೇ ಕೆಲವರು ಸಾಮೂಹಿಕ ವಿವಾಹಗಳಲ್ಲಿ ತಮ್ಮ ಮಕ್ಕಳ ಮದುವೆಗಳನ್ನು ಮಾಡಿಕೊಡುವುದುಂಟು. ಈ ರೀತಿ ವಿವಾಹಗಳು ನಡೆಯುವುದರಿಂದ ಸಾಮಾಜಿಕವಾಗಿ ಭೇದ ಭಾವಗಳು ಉಂಟಾಗಿ ಮನಸ್ಥಾಪಗಳು, ದ್ವೇಷಗಳನ್ನು ಸೃಷ್ಟಿಮಾಡಲು ಸಾಧ್ಯವಾಗುತ್ತದೆ. ಅದ್ದರಿಂದ ಒಂದೇ ರೀತಿಯ ಸಾಮೂಹಿಕ ಮದುವೆಗಳು ನಡೆದರೆ ಸಮಾಜದಲ್ಲಿ ಉಂಟಾಗುವ ಭೇದ ಭಾವಗಳನ್ನು ಒಡಕುಗಳನ್ನು ತಡೆದು ಉತ್ತಮ ಸಮಾಜ ಕಟ್ಟಲು ಸಾಧ್ಯವಾಗುತ್ತದೆ. ಯುವ ಜನಾಂಗ ಹಾಗೂ ವಿದ್ಯಾವಂತ ಸಮುದಾಯಗಳು ಸರಳ ಹಾಗೂ ಸಾಮೂಹಿಕ ವಿವಾಹಕ್ಕೆ ಹೆಚ್ಚಿನ ಅದ್ಯತೆ ಕೊಟ್ಟರೆ ಮಾತ್ರ ಒಂದು ಸುಸ್ಥಿರ ಸಮಾಜ ನಿರ್ಮಾಣವಾಗಲು ಸಾಧ್ಯವಾಗುತ್ತದೆ. ಹಾಗೂ ಕುಂಚಿಟಿಗ ಸಮುದಾಯಗಳಲ್ಲೂ ಇಂತಹ ಮನೋಭಾವ ಬೆಳೆದು ಬರಬೇಕೆಂಬುದು ಸಾಮಾಜಿಕರ ಆಶಯವಾಗಿದೆ.

**ಲಗ್ನ ಪತ್ರಿಕೆ ಬರೆಸುವುದು:**

ಹೆಣ್ಣು ಮತ್ತು ಗಂಡಿನ ಕಡೆಯ ಹಿರಿಯರು ಪುರೋಹಿತರ ಬಳಿಗೆ ತೆರಳಿ ಲಗ್ನದ ದಿನ ನಿಶ್ಚಯಿಸುತ್ತಾರೆ. ನಂತರ ತಮಗೆ ಅನುಕೂಲವಾದ ದಿನಾಂಕವನ್ನು (ಶುಭದಿನ) ಗುರುತಿಸಿ ಪುರೋಹಿತರಿಂದ ಪತ್ರಿಕೆ ಬರೆಸುತ್ತಾರೆ.

ಜೋಯಿಸರು ಪಂಚಾಂಗ ನೋಡಿ ಶುಭಮೂಹೂರ್ತ ನಿಗಧಿ ಮಾಡಿ ಲಗ್ನ ಪತ್ರಿಕೆ ಬರೆಯುತ್ತಾರೆ. ಮೊದಲು ಹೆಣ್ಣು ಗಂಡಿನ ಮನೆ ದೇವರು/ ಕುಲ ದೈವದ ಹೆಸರು, ನಂತರ ಗಂಡು ಅಥವಾ ಹೆಣ್ಣಿನ ತಂದೆ ತಾಯಿಗಳ ಹೆಸರು ಮತ್ತು ವಿಳಾಸ ಬರೆಸುವರು. ಅದಾದ ನಂತರ ಪ್ರಥಮ ಶಾಸ್ತ್ರ / ಅರಿಶಿಣ ಶಾಸ್ತ್ರದ ದಿನ, ಮುಹೂರ್ತದ ದಿನ ವಧೂ ವರರ ಹೆಸರು, ಮದುವೆ ನಡೆಯುವ ಸ್ಥಳ, ಅರತಕ್ಷತೆಯ ದಿನ ಮತ್ತು ಸಮಯ, ಆಹ್ವಾನಿಸುತ್ತಿರುವವರು ಮತ್ತು ಬಂಧು-ಮಿತ್ರರು ಹೀಗೆ ತಮಗೆ ಅನುಕೂಲವಾದಂತೆ ಬರೆಸಿ ಪತ್ರಿಕೆಯ ನಾಲ್ಕೂ ಮೂಲೆಗಳಿಗೆ ಅರಿಸಿಣ ಕುಂಕುಮ ವಿಟ್ಟು ಪೂಜೆಯನ್ನು ಮಾಡಿ ಹೆಣ್ಣಿನ ತಂದೆಯ ಕೈಗೆ ಕೊಡುವರು. ನಂತರ ಗಂಡಿನ ಮನೆಯವರು (ಇತ್ತೀಚಿಗೆ ಕಂಡು ಬಂದಂತೆ) ಲಗ್ನ ಪತ್ರಿಕೆಯನ್ನು ಮುದ್ರಿಸಿ ತಮ್ಮ ಬಂಧು ಮಿತ್ರರಿಗೆಲ್ಲಾ ಹಂಚುತ್ತಾರೆ. (ಲಗ್ನ ಪತ್ರಿಕೆಯ ಸ್ವರೂಪ ತಿಳಿಯಲು ಅದರ ಮಾಧರಿಯನ್ನು ಕೊನೆಯಲ್ಲಿ ಕೊಡಲಾಗಿದೆ).

ಇದಕ್ಕೂ ಮೊದಲು ಲಗ್ನ ಪತ್ರಿಕೆ ಬರೆದಾಗ ಹೆಣ್ಣಿನ ಕಡೆಯ ಒಬ್ಬರು, ಗಂಡಿನ ಕಡೆಯ ಒಬ್ಬರು ವಿವಾಹಿತ ಕುಲಸ್ಥರು ತಲೆಗೆ ಪೇಟ ಸುತ್ತಿಕೊಂಡು ಹಣೆಗೆ ವಿಭೂತಿಯನ್ನು ಇಟ್ಟುಕೊಂಡು ಎದುರು ಬದರು ಕೂರುತ್ತಾರೆ. ಆಗ ಪುರೋಹಿತರು ಸಭೆಯ ಒಪ್ಪಿಗೆ ಪಡೆದು ಲಗ್ನ ಪತ್ರಿಕೆಯನ್ನು ಓದುತ್ತಾರೆ. ಆನಂತರ ಎರಡೂ ಕಡೆಯ ಹಿರಿಯರು ಒಂದು ತಟ್ಟೆಯಲ್ಲಿ ಎಲೆ ಅಡಿಕೆ, ಹೂವು, ಅರಿಶಿಣ ಕುಂಕುಮ ಇಟ್ಟು ಅದರ ಮೇಲೆ ಲಗ್ನ ಪತ್ರಿಕೆ ಇಟ್ಟು ಅದಲು ಬದಲು ಮಾಡಿಕೊಳ್ಳುತ್ತಾರೆ. ಹೀಗೆ ಮಾಡುವಾಗ ಮಹಾರಾಜೇ ಶ್ರೀ...................... ಇಂಥವರ ಮಗಳನ್ನು ಮಹಾರಾಜೇ ಶ್ರೀ ಇಂತವರ ಮಗನಿಗೆ ಸಂತೋಷದಿಂದ ಒಪ್ಪಿಕೊಡಲಾಗಿದೆ ಎಂದು ಹೆಣ್ಣಿನ ಕಡೆಯವರು ಹೇಳುತ್ತಾರೆ. ಅದೇ ರೀತಿ ಗಂಡಿನ ಕಡೆಯವರು ಮಹಾರಾಜೇಶ್ರೀ ಇಂತವರ ಮಗನಿಗೆ ಮಹಾರಾಜೇಶ್ರೀ .................... ಇಂಥವರ ಮಗಳನ್ನು ಸಂತೋಷದಿಂದ ಒಪ್ಪಿ ಸ್ವೀಕರಿಸಲಾಗಿದೆ ಎಂದು ಹೇಳಿ ಅಲ್ಲಿ ನೆರೆದ ಬಂಧುಗಳಿಗೆಲ್ಲಾ ಅರಿಶಿಣ ಕುಂಕುಮ ತಾಂಬೂಲವನ್ನು ಕೊಡುತ್ತಾರೆ. ಹೀಗೆ ಲಗ್ನ ಕಟ್ಟಿಸಿದ ಮೇಲೆ ಎರಡೂ ಕಡೆಯ ಮನೆಯಲ್ಲಿ ಮಾಂಸದ ಅಡುಗೆ ಮಾಡುವುದಾಗಲೀ, ತಿನ್ನುವುದಾಗಲಿ ಮಾಡುವಂತಿಲ್ಲ.

ಲಗ್ನ ಕಟ್ಟಿಸಿದ ತರುವಾಯ ಎರಡೂ ಕಡೆಯಲ್ಲಿ ಮಧುವೆಯ ಕಾರ್ಯಗಳು ಪ್ರಾರಂಭವಾಗುತ್ತವೆ. ಬಟ್ಟೆ ಬರೆ ತರುವ, ವಡವೆ ವಸ್ತುಗಳನ್ನು ಮಾಡಿಸುವ, ಸೌದೆ ಕಡಿಸುವ ತಿಂಡಿಗಳನ್ನು ಕರಿಯುವ, ಆಹಾರ ಧಾನ್ಯಗಳನ್ನು ಸಿದ್ಧ ಪಡಿಸಿಕೊಳ್ಳುವ ಕೆಲಸಗಳು ಪ್ರಾರಂಭವಾಗುತ್ತವೆ.

**ಗುಡ್ಲು ಒಸಗೆ ಹಾಕುವ ಶಾಸ್ತ್ರ:**

ಇತ್ತ ಹೆಣ್ಣಿನ ಮನೆಯಲ್ಲಿ ಸಂಭ್ರಮದ ವಾತಾವರಣಗಳು ಒಂದೊಂದಾಗಿ ನಡೆಯುತ್ತವೆ. ಸಾಮಾನ್ಯವಾಗಿ ಹೆಣ್ಣು ಋತು ಮತಿಯಾದಾಗ ಕೆಲವರು ಸೂತಕವನ್ನು ಕಳೆದು ಕೊಳ್ಳುವುದುಂಟು. ಕೆಲವೊಮ್ಮೆ ಮದುವೆ ನಿಶ್ಚಯವಾದಾಗ ಮನೆಯ ಹೊರಗೆ ಸೋದರ ಮಾವ ಅಥವಾ ಭಾವನ ಕೈಯಲ್ಲಿ ಹಲಗೆಗಳಿಂದ ಗುಡಿಸಲು ನಿರ್ಮಿಸಿ ಹತ್ತಿಕೊನೆ, ಅಂಕಾಲೆ ಕಡ್ಡಿ, ಹೊಂಗೆ ಕೊನೆಗಳನ್ನು ಗುಡಿಸಲಿಗೆ ಇಡುತ್ತಾರೆ. ನಂತರ ಹೆಣ್ಣು ಮಗಳಿಗೆ ಸ್ನಾನ ಮಾಡಿಸಿ ಹಂಗುದಾರ (ಅರಿಶಿನದ ದಾರ) ಕಟ್ಟಿ ಕುಡಿಸಲಲ್ಲಿ ಕೂಡಿಸಿ ಪ್ರತೀ ದಿನ ಎರಡು ಅಥವಾ ಮೂರು ಒಸಗೆಯಂತೆ 5 ಅಥವಾ 9 ಒಸಗೆಯನ್ನು ಹಾಕುತ್ತಾರೆ. ಊರಿನ ಹೆಂಗಳೆಯರೆಲ್ಲಾ ಜಾತಿ ಭೇಧ ಮರೆತು ಬಂದು ಸೋಭಾನೆ ಪದಗಳನ್ನು ಹಾಡಿ ಹರಸಿ ತಾಂಬೂಲ ಹೂಗಳನ್ನು ಪಡೆದು ಸಂಭ್ರಮಿಸುತ್ತಾರೆ. ಸುಮಾರು ಮೂರು ದಿನ ರಾತ್ರಿ ಪೂರ ಆ ಹೆಣ್ಣು ಮಗಳು ನಿದ್ರಿಸುವಂತಿಲ್ಲ. ಆಕೆಯ ಜೊತೆಯಲ್ಲಿ ಅಜ್ಜಿಯರು, ಓರಗೆಯ ಗೆಳತಿಯರು, ಮಕ್ಕಳೆಲ್ಲಾ ಸೇರಿಕೊಂಡು ರಾತ್ರಿ ಪೂರ ಆಟಪಾಟಗಳನ್ನು ಹಾಡುತ್ತಾ ಕಾಲ ಕಳೆಯುವರು. ಹಾಗೆ ಮೂರು ದಿನ ಹೆಣ್ಣು ಮಗಳು ಕಲ್ಲಿನ ಮೇಲೆ ಅನ್ನವನ್ನು ಬಡಿಸಿಕೊಂಡು ತಿನ್ನ ಬೇಕಾಗುತ್ತದೆ. ಹೀಗೆ ಒಸಗೆಗಳು ಮುಗಿದ ಬೆಳಿಗ್ಗೆಯೇ ಆಕೆಗೆ ಸ್ನಾನ ಮಾಡಿಸಿ ಹತ್ತಿಮರದ ಹತ್ತಿರ ಕರೆದುಕೊಂಡು ಹೋಗಿ ಅದಕ್ಕೆ ಪೂಜೆ ಮಾಡಿಸಿ ಅರಿಶಿಣದ (ಹಂಗುದಾರ) ದಾರವನ್ನು ಬಿಚ್ಚಿಸುವುದರ ಮೂಲಕ ಸೂತಕವನ್ನು

ಕಳೆದುಕೊಳ್ಳುತ್ತಾರೆ. ಇದೇ ಸಮಯದಲ್ಲಿ ಅಗಸಗಿತ್ತಿಯರು ತಾವು ಒಂದು ಒಸಗೆ ಹಾಕಿ ಸೂತಕ ಬಿಡಿಸುತ್ತಾರೆ. ಇದನ್ನು "ಅಗಸರ ಒಸಗೆ" ಎನ್ನುವರು. ಅಲ್ಲಿಂದ ಮುಂದೆ ಮಧುವೆಯ ತನಕ ಆ ಹೆಣ್ಣು ಮಗಳು ಯಾವುದೇ ಕಷ್ಟಕರವಾದ ಕೆಲಸವನ್ನು ಮಾಡದಂತೆ ಜೋಪಾನವಾಗಿ ಮದುವಣಗಿತ್ತಿಯ ರೂಪವನ್ನು ಪಡೆಯುತ್ತ ವಿಶ್ರಾಂತಿ ಪಡೆಯುತ್ತಾಳೆ.

**ಚಪ್ಪರ ಹಾಕುವುದು:**

ಚಪ್ಪರ ಹಾಕುವುದೆಂದರೆ ಮದುವೆಯು ಪ್ರಾರಂಭವಾದಂತೆಯೆ ಮದುವೆಗೆ ಮುನ್ನಾ 3 ಅಥವಾ 5 ದಿನ ಮುಂಚಿತವಾಗಿಯೇ ತೆಂಗಿನಗರಿ, ಅಡಕೆ ಕಂಬಗಳನ್ನು ತಂದು ದೇವಮೂಲೆಯಲ್ಲಿ ಮೊದಲು ಕಂಬ ನೆಡುತ್ತಾರೆ. ನೆಡುವಾಗ ಒಳ್ಳೆಯ ಕಾಲವನ್ನು ನೋಡಿ, ಗುಂಡಿಯನ್ನು ತೊಡಿ, ಅದಕ್ಕೆ ಹವಳ, ಚಿನ್ನ, ಬೆಳ್ಳಿ ಬಂಗಾರದ ತುಣುಕುಗಳನ್ನು ಹಾಕಿ ಕಂಬವನ್ನು ನೆಟ್ಟು ಅವರವರ ಮನೆಯಲ್ಲಿ ವಧುವರರಿಂದ ಪೂಜೆ ಮಾಡಿಸುತ್ತಾರೆ. ನಂತರ ಕಂಬಕ್ಕೆ ನವಧಾನ್ಯಗಳ ಗಂಟನ್ನು ಅರಿಸಿಣದ ದಾರದಲ್ಲಿ ಕಂಬಕ್ಕೆ ಕಟ್ಟಿಸುತ್ತಾರೆ. ಅಲ್ಲಿಂದ ಮುಂದೆ ಊರಿನ ತೋಟಿ, ತಳವಾರರು ಹಾಗೂ ಕೆಲವು ಗಂಡಸರು ಸೇರಿಕೊಂಡು ಮನೆಯ ಮುಂಭಾಗ ವಿಶಾಲವಾದ ಹಸಿರು ಚಪ್ಪರಗಳನ್ನು ಸಿದ್ಧ ಪಡಿಸುತ್ತಾರೆ. ಕಂಬಗಳಿಗೆ ತೆಂಗಿನ ಗರಿಗಳನ್ನು ಸುತ್ತಿ ಕಂಬ ಕಾಣದಂತೆ ಮಾಡುತ್ತಾರೆ. ನಂತರ ಮದುವೆಯ ಮೊದಲ ದಿನವೇ ಊರಿನ ತೋಟಿ ತಳವಾರರು ಕೆಂಪು, ಕೇಸರಿ ಬಣ್ಣದ ಹೂಗಳನ್ನು ತಂದು ಚಪ್ಪರಕ್ಕೆ ಕಟ್ಟುತ್ತಾರೆ. ಮಾವಿನ ಸೊಪ್ಪನ್ನು ಚಪ್ಪರದ ಸುತ್ತಲೂ ಕಟ್ಟುತ್ತಾರೆ. ರೈತರಾದವರು ತಾವು ಬೆಳೆಯುವ ತೆಂಗಿನ ಗೊನೆ, ಬಾಳೆ ಗೊನೆ ಹಾಗೂ ಕಂಬಗಳನ್ನು ಕಟ್ಟುತ್ತಾರೆ. ಹಾಗೆ ಬಣ್ಣ ಬಣ್ಣದ ಕಾಗದಗಳನ್ನು ಚಿತ್ತಾಕರ್ಷವಾಗಿ ಕತ್ತರಿಸಿ ಗಂಜಿಯಿಂದ ದಾರಕ್ಕೆ ಅಂಟಿಸಿ ಚಪ್ಪರವನ್ನು ಅಲಂಕರಿಸುತ್ತಾರೆ. ಇತ್ತೀಚಿಗಂತು ವಿದ್ಯೂತ್ ದೀಪಗಳನ್ನು (ಸೀರಿಯಲ್ ಸೆಟ್) ಮನೆ, ಚಪ್ಪರ, ಊರಿನ ಬೀದಿಗಳಿಗೆಲ್ಲ ಬಿಟ್ಟು ಬೆಳಕಿನಿಂದ ಜನಮಗಿಸುವಂತೆ ಮಾಡಿ ನೋಡುಗರ ಕಣ್ಮನ ಸೆಳೆಯುವಂತೆ ಸಿಂಗಾರಗೊಳಿಸುತ್ತಾರೆ. ಹಾಗೆ ಹೂವಿನಿಂದ ಬಗೆ ಬಗೆಯಾಗಿ ವಧು ವರ ಕುಟುಂಬದವರ ಹೆಸರು ಬರೆಸಿ ಮದುವೆ ಮನೆಯ ಮುಂದೆ ಕಟ್ಟುತ್ತಾರೆ. ಒಟ್ಟಾರೆ ಸ್ವರ್ಗವೇ ಬಂದು ಧಲೆಗಿಳಿದಂತೆ ಕಣ್ಣು ಮತ್ತು ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತದೆ. ಜೊತೆಗೆ ಧ್ವನಿ ವರ್ಧಕಗಳನ್ನು ಹಾಕಿಸಿ ಸಂಗೀತ, ಹಾಡುಗಳ ರಸಪಾಕವು ಕರ್ಣಾನಂದವನ್ನುಂಟು ಮಾಡುತ್ತದೆ. ಒಟ್ಟಾರೆ ಊರಿಗೆ ಊರೆ ಮದುವೆ ಕಾರ್ಯದಲ್ಲಿ ಭಾಗವಹಿಸಿ ಸಂಭ್ರಮಿಸುತ್ತದೆ.

**ಅರುಣೆ ಶಾಸ್ತ್ರ:**

ಪ್ರಥಮ ಶಾಸ್ತ್ರಕ್ಕೆ ಮುನ್ನ ಮೂರು ಜನ ಮುತ್ತೈದೆಯರು ಇಬ್ಬರು ವಿವಾಹಿತ ಗಂಡಸು ಬಿದುರಿನ ಬುಟ್ಟಿಯಲ್ಲಿ ಗೂಡಿಯಲ್ಲಿ ದಾನ್ಯ, ಹೂ ತಾಂಬೂಲ ದಕ್ಷಿಣೆ ಸಮೇತ ಕುಂಬಾರರ ಮನೆಗೆ ತರಳಿ ಹೊಸ್ಯ ಅರವಿ (ಮಡಕೆ) ಕುಡಿಕೆಗಳನ್ನು ತರುವುದು ವಾಡಿಕೆ, ಹಾಗೆ ತರುವಾಗ ತಾವು ತೆಗೆದುಕೊಂಡು ಹೋಗಿದ್ದ "ಅಚ್ಚಂದಿ" ಯನ್ನು ಕುಂಬಾರನಿಗೆ ಕೊಡುವ

ಪದ್ಧತಿಯು ಉಂಟು ಕುಂಬಾರನು ತನ್ನ ಸಂಪ್ರದಾಯದಂತೆ ಹೊಸ ಜೇಡಿ ಮಣ್ಣನ್ನು ತಂದು ತುಳಿದು ಹದಗೊಳಿಸಿ ಚಕ್ರಕ್ಕೆ ಹಿಡಿದು ಸುಮಾರು 5 ಮಡಕೆ ತಯಾರಿಸಿ ಅವುಗಳನ್ನು ಆವಿಗೆಯಲ್ಲಿಟ್ಟು ಹುಲ್ಲನ್ನು ಮುಚ್ಚಿ ಬೆಂಕಿ ಹಚ್ಚಿ ಮರುದಿನ ಬೆಳಿಗ್ಗೆ ಅವುಗಳನ್ನು ಹೊರ ತೆಗೆದು ಪೂಜಿಸಿ ಕೊಡುತ್ತಾನೆ. ಇದನ್ನೇ "ಅರುಣಿ ಶಾಸ್ತ್ರ" ಎನ್ನುವರು.

**ಶಾಸ್ತ್ರದ ನೀರು ತರುವುದುಃ**

ಐದು ಜನ ಮುತ್ತೈದೆಯರನ್ನೊಳಗೊಂಡ ಗುಂಪು ಹೊಸ ಅರವಿಗಳನ್ನು ತೆಗೆದುಕೊಂಡು ಶಾಸ್ತ್ರದ ನೀರು ತರಲು ಸಜ್ಜಾಗುತ್ತಾರೆ. ಇವರ ಜೊತೆಯಲ್ಲಿ ಇನ್ನಿತರರು ತಟ್ಟೆಗಳಲ್ಲಿ ಎಲೆ, ಅಡಿಕೆ, ಅರಿಶಿಣ ಕುಂಕುಮ ತಂಬಿಟ್ಟಿನ ಉಂಡೆ ಕರೀಮಣಿ ಬಿಚ್ಚೋಲೆ, ಕಳಸ ಕನ್ನಡಿ, ಹೊಂಬಾಳೆಯೊಂದಿಗೆ ಹೊರಡುತ್ತಾರೆ. ಅಲ್ಲಿಂದ ಬಾವಿಯ ಬಳಿ ಬಂದು ಸ್ವಲ್ಪ ನೀರನ್ನು ತೆಗೆದುಕೊಂಡು ಸುತ್ತಲೂ ಚಿಮುಕಿಸಿ ಸೇಳೇವು ಕೊಡುತ್ತಾರೆ. ನಂತರ ಸ್ವಲ್ಪ ಮರಳನ್ನು ಗುಡ್ಡೆ ಮಾಡಿ ಮೂರು ಸಮಗಾತ್ರದ ಕಲ್ಲುಗಳನ್ನು ತೊಳೆದು ಮರಳಿನ ಮೇಲೆ ಗಣಪತಿಯ ಪ್ರತಿರೂಪವಾಗಿ ಬೆನಕಗಳನ್ನು ಜೋಡಿಸುತ್ತಾರೆ. ಹೊಸ ಅರವಿಗಳನ್ನು ತೊಳೆದು ನೀರು ತುಂಬಿ ಸಾಲಾಗಿ ಜೋಡಿಸಿ ಅರಿಶಿಣ ಕುಂಕುಮವಿಟ್ಟು ಹಂಗುದಾರ ಕಟ್ಟುತ್ತಾರೆ. ನಂತರ ಬೆನಕ ಮತ್ತು ಅರಿವಿಗಳಿಗೆ ಹಣ್ಣು ಕಾಯಿಗಳನ್ನು ಒಡೆದು ಪೂಜಿಸುತ್ತಾರೆ. ಅಲ್ಲಿ ಪತ್ತು ಹಿಡಿದಿರುವ ಅಗಸರ ಮಡಿವಾಳಪ್ಪ ಅಲ್ಲಿ ಹಾಕ್ಕಿದ್ದ ಎಡೆಯನ್ನು ತೆಗೆದುಕೊಳ್ಳುವನು. ಸೋಬಾನದ ಹಾಡಿನೊಂದಿಗೆ ವಾದ್ಯ ಸಮೇತ ಬಹಳ ಜೋಪಾನವಾಗಿ ಮೆರವಣಿಗೆಯಲ್ಲಿ ಮನೆಗೆ ತರುತ್ತಾರೆ. ಬಾಗಿಲಲ್ಲಿ ಎಲ್ಲರ ಕಾಲಿಗೂ ನೀರು ಹಾಕಿ, ಅರತಿ ಬೆಳಗಿ ಜೋಪಾನವಾಗಿ ದೇವರ ಮನೆಯಲ್ಲಿ ಅವುಗಳನ್ನು ಇಡುತ್ತಾರೆ.

ಈ ವೇಳೆಗಾಗಲೇ ಊರಿನ ಕುಲಸ್ಥರೆಲ್ಲ ಮನೆಗೊಬ್ಬರಂತೆ ಹಾಜರಿದ್ದು, ಅಡುಗೆ ಸಿದ್ದತೆಯ ಕಾರ್ಯದಲ್ಲಿ ತಲ್ಲೀನರಾಗಿರುತ್ತಾರೆ. ಉದ್ದನೆಯ ಸಾರೋಲೆಯ/ ಕೊಪ್ಪರಿಗೆ ಒಲೆ ಹಾಕಿ, ಅರಿಶಿಣ ಕುಂಕುಮ ವಿಟ್ಟು ಪೂಜಿಸಿ ಶುಭ ಘಳಿಗೆಯಲ್ಲಿ ಶಾಸ್ತ್ರದ ನೀರನ್ನು ಚಿಮುಕಿಸಿ ಒಲೆಗೆ ಬೆಂಕಿ ಹಾಕುತ್ತಾರೆ. ಬಾವಿಯಿಂದ ತಂದ ಸ್ವಲ್ಪ ಶಾಸ್ತ್ರದ ನೀರನ್ನು ಅಡುಗೆಗೆ ಬಳಸಿಕೊಳ್ಳುತ್ತಾರೆ. ಕುಂಚಿಟಗರು ಮದುವೆಗಳಲ್ಲಿ ಮಾಂಸಾಹಾರ ಮಾಡುವುದಿಲ್ಲ. ಬದಲಾಗಿ ಪ್ರಥಮ ಶಾಸ್ತ್ರದ ದಿನ ಅರಿಶಿಣ/ ಚಿತ್ರಾನ್ನ, ಅನ್ನ ಸಾಂಬಾರು, ಪಾಯಸ, ಹಪ್ಪಳ, ಸಂಡಿಗೆ. ಒಂದೆರಡು ರೀತಿಯ ಪಲ್ಯಗಳನ್ನು ಮಾಡುತ್ತಾರೆ. ಇವರ ಮನೆಯಲ್ಲಿ ಊಟ ಮಾಡದ ಬ್ರಾಹ್ಮಣ ಮತ್ತು ಲಿಂಗಾಯಿತರ ಮನೆಗಳಿಗೆ ಅಡುಗೆಗೆ ಬಳಸುವ ಪದಾರ್ಥಗಳನ್ನು ಬಿದಿರಿನ ಮೊರದಲ್ಲಿಟ್ಟು "ತಳಿಗೆ" ಕೊಡುವ ವಾಡಿಕೆಯುಂಟು

**ಒಳ್ಳಕ್ಕೆ ಶಾಸ್ತ್ರ (ಕುಂದಲಿಕೆ ಶಾಸ್ತ್ರ):**

ಪ್ರಥಮ ಶಾಸ್ತ್ರದ ದಿನ ಒಳ್ಳಕ್ಕೆ ಶಾಸ್ತ್ರ ಮಾಡುತ್ತಾರೆ. ಒರಕ್ಕೆ ಎನ್ನುವರು ಒರಳು+ ಅಕ್ಕಿ. ಅಂದರೆ ಒಳಕಲ್ಲಿಗೆ ಭತ್ತವನ್ನು ಹಾಕಿ ಕುಟ್ಟಿದಾಗ ಬರುವ ಅಕ್ಕಿಯಾದುದರಿಂದ ಒರಕ್ಕೆ ಎನ್ನುವರು. ಭತ್ತದ ಗಿರಿಣಿಗಳಿಲ್ಲಿದ ಕಾಲದಲ್ಲಿ ಭತವನ್ನು ಕುಟ್ಟಿ ಅಕ್ಕಿ ಯನ್ನು ಪಡೆಯುತ್ತಿದರು. ಪ್ರಥಮ ಶಾಸ್ತ್ರದ ದಿನ ಒರಳಿರುವ ಜಾಗವನ್ನು ಸ್ವಚ್ಚಗೊಳಿಸಿ ಅದರಲ್ಲಿ 9 ಸೇರು ಭತ್ತವನ್ನು ಸುರಿದು ಕಡಿ(ಕುಂದಲಿಕೆ) ಯನ್ನು ಇಡುತ್ತಾರೆ. ಕುಂದ್ಲಿಕೆ ಎಂದರೆ ಒರಳಲ್ಲಿರುವ ಭತ್ತವನ್ನು ಕುಟ್ಟುವಾಗ ಹೊರಗೆ ಬರದಂತೆ ತಡೆಯಲು ಮರದಿಂದಲೂ, ಕಬ್ಬಿಣದಿಂದಲೊ ಮಾಡಿರುವ ಒಂದು ಸಾಧನ.

ಒಂದು ಮೂಲೆಯಲ್ಲಿ ತುದಿಭಾಗಕ್ಕೆ ಬಳೆತೊಡಿಸಿರುವ ಮೂರು ಒನಕ್ಕೆಗಳನ್ನು ಇಡುತ್ತಾರೆ. ಪುಟ್ಟಿ (ಹೆಡಿಗೆ) ಯಲ್ಲಿನ ಭತ್ತವನ್ನು ಕಡಿಯಲ್ಲಿ ಮತ್ತು ಹರಿವಾಣದಲ್ಲಿ ತುಂಬುತ್ತಾರೆ. ಶಾಸ್ತ್ರಕ್ಕೆ ನಿಂತ ಮುತ್ತೈದೆ ಕುಲಸ್ಥೆಯರು ಒಂದೊಂದು ಒನಕ್ಕೆ ಹಿಡಿದು ನಿಲ್ಲುತ್ತಾರೆ. ಪಕ್ಕದಲ್ಲಿ ಕಲಶವಿರುತ್ತದೆ.

ಹೀಗೆ ಕುಂದಲಿಕೆ ಶಾಸ್ತ್ರಕ್ಕೆ ಬಳಸುವ ಕಡಿ, ಒನಕ್ಕೆ, ಪುಟ್ಟಿಗೆಗಳಿಗೆ ಅರಿಶಿಣ ಕುಂಕುಮ ವಿಟ್ಟು. ವಿಭೂತಿ ಬಳಿದು ಹಂಗುದಾರ ಕಟ್ಟುತ್ತಾರೆ. ಹಾಗೆ ಒನಕೆ ಹಿಡಿದವರನ್ನು ಅರಿಶಿನ ಕುಂಕುಮ ವಿಟ್ಟು ಪೂಜೆ ಮಾಡಿದ ನಂತರ ಒನಕೆಗಳು ಒಂದಕ್ಕೊಂದು ತಾಗದಂತೆ ನಿಧಾನವಾಗಿ ಕ್ರಮಗತಿಯಲ್ಲಿ ಭತ್ತವನ್ನು ಕುಟ್ಟುತ್ತಾರೆ. ಆಗ ಸೋಭಾನೆಯವರು ಹಾಡುತ್ತಾರೆ.

"ಸುವ್ವಾ ಬಾ ಸುವ್ವಿ ಸುವ್ವಾ ಬಾ"

ಹಾದೇಗ ಒಳಕಲ್ಲು ಬೀದ್ಯಾಗ ಸೇದಾಬಾವಿ
ಚಿನ್ನಾದ ಕೋಲ್ಯಾಕೆ ಹೊರಗ್ಯಾವೆ / ತಾಯಮ್ಮ
ಮಗನ ಮದುವೇಯ ಮನೆಯಾಗೆ

ತಂದೆ ಮಕ್ಕಳಿಬ್ಬರು ತುಪ್ಪವಾಗರುಂಡು
ಮುತ್ತೀನ ಹಾರೇಯ ಹೆಗಲೇರಿ/ ತೆಗೆದಾರೆ
ಕೊಟ್ಟ ರಾಜುನದ ಕಣಜಾವ

ಅಣ್ಣತಮ್ಮರಿಬ್ಬರೂ ಹಾಲುವಾಗರುಡು
ಚಿನ್ನದ ಹಾರೇಯ ಎಗಲೂಡಿ/ ತೆಗ ಸ್ಯಾರೆ
ಸಣ್ಣ ರಾಜುನದ ಕಣಜಾವ [3]

....... ಎಂದು ಹಾಡುತ್ತಿರುತ್ತಾರೆ. ಭತ್ತ ಕುಟ್ಟುವಾಗ ಪ್ರತಿಯೊಂದರಲ್ಲು ಸ್ವಲ್ಪ ಭತ್ತ ತೆಗೆದು ಕೇರುತ್ತಾರೆ. ಹೀಗೆ ಮೂರು ಭಾರಿ ಮಾಡಿದ ಮೇಲೆ ಕುಂದಲಿಕೆ ಶಾಸ್ತ್ರ ಮುಗಿಯುತ್ತದೆ. ಶಾಸ್ತ್ರ ಮಾಡಿದವರಿಗೆ ಎಲೆ ಅಡಿಕೆಯಲ್ಲಿ ಬಾಳೆ ಹಣ್ಣು, ತಂಬಿಟ್ಟು ಕೊಡುತ್ತಾರೆ. ಹಾಗೆ ಕುಟ್ಟಿದ ಒಂದಕ್ಕಿ ಒಂದುನೆಲ್ಲನ್ನು ತೆಗೆದು ಪುಟ್ಟಿಗೆಯಲ್ಲಿ ಇಡುತ್ತಾರೆ. ಅಲ್ಲಿ ಶಾಸ್ತ್ರ ನೋಡಲು ನೆರೆದಿದ್ದವರಿಗೆಲ್ಲ ಅರಿಶಿಣ ಕುಂಕುಮ ತಾಂಬೂಲವನ್ನು ನೀಡುತ್ತಾರೆ.

**ದಿಬ್ಬಣ ಹೊರಡುವುದು:**

ಇತ್ತ ಪ್ರಥಮ ಶಾಸ್ತ್ರದ ದಿನ ಗಂಡಿನ ಮನೆಯಲ್ಲಿ ಬಂಧು ಬಾಂಧವರೆಲ್ಲ ಸೇರುತ್ತಾರೆ. ಅಂದು ವರನಾದವನಿಗೆ ಕ್ಷೌರಿಕನನ್ನು ಕರೆಸಿ ಬಾಳೆಎಲೆಯಲ್ಲಿ ಒಂದು ಸೇರು ಅಕ್ಕಿ, ಬೆಲ್ಲ, ಎಲೆ ಅಡಿಕೆ, ಬಾಳೆಹಣ್ಣು, ದಕ್ಷಿಣೆ ಮತ್ತು ಒಂದು ವಸ್ತ್ರವನ್ನು ಇಟ್ಟು ಸಂಪ್ರದಾಯ ಬದ್ದವಾಗಿ ಕ್ಷೌರ ಮಾಡಿಸಿ, ಶಾಸ್ತ್ರಕ್ಕೆ ಕಾಲಿನ ಉಗುರನ್ನು ಕತ್ತರಿಸಿ ತಡೆ ಬಿಡಿಸುತ್ತಾನೆ. ನಂತರ ಅವನಿಗೆ ತಾಂಬೂಲ ಸಮೇತ ಧಕ್ಷಿಣೆ ಕೊಟ್ಟುಕಳಿಸಿ ವರನು ಸ್ನಾನ ಮಾಡುತ್ತಾನೆ. ಇದಾದ ನಂತರ ತನ್ನ ಕುಲದೈವಕ್ಕೂ, ಹಿರಿಯರ ಸಮಾಧಿಗಳಿಗೂ ಪೂಜೆ ಸಲ್ಲಿಸಿ ನಂತರ ತನ್ನ ಊರಿನವರನ್ನು ಮದುವೆಗೆ ಕರೆಯಲು ಸಿದ್ಧನಾಗುತ್ತಾನೆ. ಸಂಜೆಯ ವೇಳೆಗೆ ಮದುವೆಗೆ ಹೊರಟ ಜನರಿಗೆ ತನ್ನ ಮನೆಯಲ್ಲಿ ಸಿದ್ದ ಪಡಿಸಿರುವ ಅಡುಗೆಯನ್ನು ಉಣ ಬಡಿಸುತ್ತಾರೆ. ಇಲ್ಲಿ ಮೊದಲು ದಾಸಯ್ಯನನ್ನು ಕರೆದು ಶಾಸ್ತ್ರೋಕ್ತವಾಗಿ ಗರುಡಗಂಭ, ಜಾಗಟೆಗಳಿಗೆ ಪೂಜಿಸಿ ಗೋವಿಂದ ಎನ್ನಿಸಿ ದಾಸಯ್ಯನ ಪಂಕ್ತಿಯನ್ನು ಮಗಿಸಿದ ಮೇಲೆ ಇನ್ನಿತರರು ಊಟ ಮಾಡುತ್ತಾರೆ.

ಸರಿಸುಮಾರು ಸಂಜೆ ವೇಳೆಗೆ ಊರಿನ ಜನರೆಲ್ಲ ಕೆಲಸಗಳನ್ನು ಮುಗಿಸಿ ಬಂದು ಮದುವೆಗೆ ಹೊರಡುತ್ತಾರೆ. ಶುಭ ಘಳಿಗೆಯನ್ನು ನೋಡಿ ಮನೆಯಿಂದ ಹೊರಡುವಾಗ ಮಧು ಮಗನು ತಂದೆ ತಾಯಿ ಗುರುಹಿರಿಯರಿಗೆ ನಮಸ್ಕರಿಸಿ, ಮನೆಯಲ್ಲಿ ನೆಲೆ ದೀವಿಗೆಗೆ ಪೂಜೆ ಸಲ್ಲಿಸಿ, ಗ್ರಾಮದೈವದ ಸನ್ನಿಧಿಗೆ ಬಂದು ಪೂಜೆ ಸಲ್ಲಿಸಿ ಬಂಧು ಬಾಂದವರೊಡಗೂಡಿ ದಿಬ್ಬಣ ಹೊರಡುತ್ತಾರೆ. ಹೀಗೆ ಹೊರಡುವಾಗ ವಾದ್ಯ ಸಮೇತ ಕಮಾನಿಂದ ಅಲಂಕೃತಗೊಂಡ, ಗಾಡಿಗಳಿಗೆ, ಬಣ್ಣದ ಗವಸ (ವಸ್ತ್ರ)ಗಳನ್ನು ಕೊಂಬು ಕಳಸಗಳನ್ನು ಗೆಜ್ಜೆಗಳನ್ನು ಕಟ್ಟಿರುವ ಎತ್ತುಗಳನ್ನು ಊಡಿ ಮಧುಮಗ ಹಾಗೂ ಬಂಧುಗಳನ್ನು ಕೂಡಿಸಿಕೊಂಡು ಹೆಣ್ಣಿನ ಮನೆಯ ಕಡೆ ಹೊರಡುತ್ತಾರೆ. ಗೆಜ್ಜೆಗಳ ಸಪ್ಪಳ, ಬಣ್ಣ ಬಣ್ಣದಿಂದ ಅಲಂಕೃತಗೊಂಡ ಗಾಡಿಗಳು ಸಾಲಾಗಿ ಹೊರಟಾಗ ನೋಡುವುದೇ ಒಂದು ಸಂಭ್ರಮ.

**ತಳಿಹಿಡಿಯುವುದು:**

ಒಕ್ಕಲಿಗ ಜನಾಂಗದ ಮದುವೆಗಳಲ್ಲಿ ತಳಿಹಿಡಿಯುವ ಪದ್ಧತಿಯು ಹಿಂದಿನಿಂದಲೂ ನಡೆದು ಬಂದಿದೆ. ಒಂದು ಬಿಳಿಯ ಪಂಜೆಯನ್ನು ನಾಲ್ಕು ಜನ ಗಂಡಸರು ನಾಲ್ಕು ಮೂಲೆಯ ಹಂಚುಗಳನ್ನಿಡಿದು ಮೇಲೆತ್ತಿ ನಡೆಯುತ್ತಾರೆ. ಮಧ್ಯೆ

ಒಬ್ಬನು ಒಂದು ಗುಜ್ಜನ್ನು (ತಪ್ಪಸ್ವಿಗಳು ಮೊಳಕೈಗೆ ಆಧಾರವಾಗಿ ಹಿಡುವಂತ ಒಂದು ಕಟ್ಟಿಗೆ) ಹಿಡಿದು ಪಂಚೆಯನ್ನು ಮೇಲೆತ್ತುತ್ತಾನೆ. ಅದರ ಕೆಳಗೆ ಕಳಸಹಿಡಿದವರು, ಗಂಡು/ಹೆಣ್ಣುನ್ನು ಕರೆತರುವಾಗ ಅಥವಾ ಉಡಿಕೆ ನಡೆಯುವಾಗ ಬಳಸುವ ಕ್ರಮವೇ ತಳಿ ಹಿಡಿಯುವ ಶಾಸ್ತ್ರ. ಇತ್ತೀಚಿನ ದಿನಗಳಲ್ಲಿ ಇಬ್ಬರೂ ಮಾತ್ರ ಪಂಚೆಯ ನಾಲ್ಕು ಮೂಲೆ ಹಿಡಿಯುತ್ತಾರೆ. ಕೆಲವೊಮ್ಮೆ "ಛತ್ರಿ" ಕೊಡೆಯ ಮೇಲೆ ಬಿಳಿ ಪಂಚೆಯನ್ನು ಹೊದಿಸಿಯೂ ಈ ಶಾಸ್ತ್ರ ಮುಗಿಸುತ್ತಾರೆ. ಇದು ಹಿಂದೆ ರಾಜ ಮಹಾರಾಜರು ಬರುವಾಗ ಬಿಳಿಕೊಡೆಯನ್ನು. ದೇವತಾ ಕಾರ್ಯಗಳಲ್ಲಿ ಉತ್ಸವ ಮೂರ್ತಿಗಳ ಮೇಲೆ ಬಣ್ಣದ ಕೊಡೆಗಳನ್ನು ಹಿಡಿಯವಂತ ಕ್ರಮಗಳನ್ನು ನೆನಪಿಸುತ್ತದೆ.

**ಬೀಗರನ್ನು ಎದುರುಗೊಳ್ಳುವುದು, ದಿಬ್ಬಣ ಕರೆತರುವುದು:**

ಸಂಜೆ ವೇಳೆಗೆ ಹೆಣ್ಣಿನ ಊರಿಗೆ ಬಂದ ವರನ ಕಡೆಯವರನ್ನು ಎದುರುಗೊಳ್ಳಲು ಹೆಣ್ಣಿನ ಕಡೆಯವರು ಬರುತ್ತಾರೆ. ಇದನ್ನೇ ಬೀಗರನ್ನು ಎದುರುಗೊಳ್ಳುವುದು ಎನ್ನುತ್ತಾರೆ. ದಿಬ್ಬಣ ಎಂದರೆ ಗಂಡಿನ ಮನೆಯವರು ಮೊದಲ ಭಾರಿಗೆ ತಮ್ಮ ಮನೆಯ ಸೊಸೆಯಾಗುವವಳಿಗೆ ಸೀರೆ, ಹೂವು, ಬಳೆ ತಾಂಬೂಲ ಅರಿಶಿಣ ಕುಂಕುಮವನ್ನು ಒಂದು ಹೊಸ ಬಿದಿರಿನ ಬುಟ್ಟಿಯಲ್ಲಿ ಇಟ್ಟಿರುತ್ತಾರೆ. ಜೊತೆಗೆ ಒಂದು ಬಿದಿರಿನ ಸಣ್ಣ ಚಾಪೆ, ಮೊರವನ್ನು ಒಳಗೊಂಡಿರುವುದೇ ದಿಬ್ಬಣ ಎನ್ನುವರು. ಹೀಗೆ ಬಂದ ವರನ ಕಡೆಯವರನ್ನು ದೇವಸ್ಥಾನ, ಶಾಲಾ ಕಟ್ಟಡದ ಹತ್ತಿರ ಬಿಡುತ್ತಾರೆ. ವರನ ಜೊತೆಯಲ್ಲಿ ಬಂದವರಿಗೆ ಧಣಿವಾರಿಸಿಕೊಳ್ಳಲು ನೀರು, ಪಾನಕ, ತಿಂಡಿಗಳನ್ನು ತಂದು ಕೊಡುತ್ತಾರೆ. ನಂತರ ವರನು ಮುಖ ತೊಳೆದು ಸಿದ್ದವಾದ ಮೇಲೆ ಹೆಣ್ಣಿನ ಮನೆಯವರು ವಾದ್ಯ ಸಮೇತ ಕಳಸ, ತಾಂಬೂಲ ಹೂ ಕಾಯಿಗಳೊಂದಿಗೆ ಬಂದು ಗಂಡನ್ನು ಕೂರಿಸಿ ವಿಭೂತಿ ಇಟ್ಟು ಸೇಸೆ ಇಡುತ್ತಾರೆ. ಕೆಲವೊಂದು ಕಡೆ ಗಂಡಿನ ಕಡೆಯ ಸೊದರಿಕೆಯ ಒಬ್ಬಿಬ್ಬರು ಹುಡುಗರನ್ನು ಗಂಡಿನ ಪಕ್ಕದಲ್ಲಿ ಕೂರಿಸಿ ತಲೆಗೆ ಪೇಟಸುತ್ತಿ ಕುಂಕುಮ ವಿಭೂತಿಗಳನಿನ್ನಟ್ಟು ಹಾರ ಹಾಕಿ ಅವರಿಗೂ ಸೀಸೆ ಇಡುವುದುಂಟು. ಇದನ್ನು ಬದಲಿ ಗಂಡು ಎಂದು ಕರೆವರು. ನಂತರ ಬದಲಿ ಗಂಡಿಗೆ ಫಲ ತಾಂಬೂಲ ನೀಡುವಾಗ ಸಂಪ್ರದಾಯದಂತೆ ಅತನು ಸೇಸೆ ಇಟ್ಟಂತಹ ಹೆಂಗಸನ್ನು "ನನಗೆ ಒಂದು ಹೆಣ್ಣು ಕೊಡಿ ಅಥವಾ ಹನ್ನೆರಡು ಹಣ್ಣು ಕೊಡಿ" ಎಂದು ಕೇಳುವನು, ತದನಂತರ ಗಂಡನ್ನು ನೋಡಲು ಬಂದವರೆಲ್ಲರಿಗೂ ತಾಂಬೂಲ ನೀಡಿ ಊರಿನ ಬೀದಿಯಲ್ಲಿ ಮೆರವಣಿಗೆ ಮೂಲಕ ಹೆಣ್ಣಿನ ಮನೆಗೆ ಕರೆತರುವರು. ಬಾಗಿಲಲ್ಲಿ ಅರತಿ ಬೆಳಗಿ ಬಲಗಾಲಿಟ್ಟು ಬರುವಂತೆ ತಿಳಿಸಿ ಗಂಡನ್ನು ಮನೆ ತುಂಬಿಸಿಕೊಳ್ಳುವರು.

ಅಂದು ಊರಿನ ಕುಲಸ್ಥರು, ನೆಂಟರು, ಎಲ್ಲರೂ ಮದುವೆ ಮನೆಯಲ್ಲೆ ಊಟ ಮಾಡಬೇಕು ಯಾರು ಒಲೆಯನ್ನು ಹಚ್ಚ ಬಾರದೆಂದು ಮೊದಲೇ ತಿಳಿಸಿರುವುದರಿಂದ ಎಲ್ಲರೂ ಊಟ ಮಾಡುತ್ತಾರೆ. ಜೊತೆಗೆ ಸುತ್ತಮುತ್ತಲ

ಊರಿನ ಜನರು ಬರುತ್ತಾರೆ. ಇಲ್ಲಿ ವಿಶೇಷವಾಗಿ ಗಂಡಿನ ಕಡೆಯವರಿಗೆ ಯಾವುದೇ ತೊಂದರೆಯಾಗದಂತೆ ಜಾಗರೂಕತೆಯಿಂದ ಸತ್ಕಾರ ಮಾಡುವುದು ಹೆಣ್ಣಿನ ಕಡೆಯವರ ಕರ್ತವ್ಯವಾಗಿರುತ್ತದೆ.

**ಬಳೆ ತೊಡಿಸುವ ಶಾಸ್ತ್ರ:**

ಅಂದು ರಾತ್ರಿ ಬಳೆ ಶೆಟ್ಟಿಯನ್ನು ಕರೆಸಿ ಒಂದು ತಟ್ಟೆಯಲ್ಲಿ ಸೇರಕ್ಕಿ ಎಲೆ ಅಡಿಕೆ ಹಣ್ಣು ಕಾಯಿ ಹಾಗೂ ಹಣವನ್ನು ಒಳೆಯ ಮಲ್ಲಾರದ ಮುಂದಿಟ್ಟು ಹೆಣ್ಣಿನ ಕೈಯಿಂದ ಹೆಣ್ಣಿನ ಕೈಯಿಂದ ಬಳೆ ಮಲ್ಲಾರವನ್ನು ಪೂಜಿಸುತ್ತಾರೆ. ನಂತರ ಬಳೆ ಶೆಟ್ಟಿಯು ಸಂಪ್ರದಾಯದಂತೆ ವಧುವಿನ ಎರಡೂ ಕೈಗಳ ತುಂಬ ಕರೀ ಬಳೆಯನ್ನು ತೊಡಿಸುವನು. ಆಗ ಹೆಣ್ಣು ಬಳೆಗಾರನನ್ನು ಮುಟ್ಟಿ ನಮಿಸಿ ಏಳುವಳು. ಹಾಗೂ ಮದುವೆಗೆ ಬಂದಿರುವ ಗಂಡು ಹೆಣ್ಣಿನ ಕಡೆಯ ಹೆಂಗಸರಿಗೆಲ್ಲಾ ಎರಡೆರಡು ಕಂಬಳಿಯನ್ನು ತೊಡಿಸಿ ಶಾಸ್ತ ಮುಗಿಸುವನು. ನಂತರ ಎಲ್ಲರೂ ಊಟ ಮುಗಿಸಿ ವಿಶ್ರಾಂತಿ ಪಡೆದು ಮಧ್ಯ ರಾತ್ರಿಯ ನಂತರ ಶಾಸ್ತ್ರಗಳು ಪ್ರಾರಂಭಗೊಳ್ಳುವವು.

**ಹಸೆ ಬರೆಯುವುದು:**

ಮನೆಯ ಮಧ್ಯಭಾಗದಲ್ಲಿ ನೆಲವನ್ನು ತಣ್ಣಗೆ ಮಾಡಿ ಪಿಳ್ಳೆರಾಯ ಮತ್ತು ಕಲಶ ಇಟ್ಟು ಪೂಜಿಸುತ್ತಾರೆ. ಒಳ್ಳಕ್ಕಿ ಶಾಸ್ತ್ರದಲ್ಲಿ ಕುಟ್ಟಿದ ಅಕ್ಕಿಯನ್ನು ನೆಲದ ಮೇಲೆ ಅರಡಿ ಅನೇಕ ರೀತಿಯ ರೇಖಾ ಚಿತ್ರಗಳನ್ನು ಬರೆಯುತ್ತಾರೆ. ಈ ಸಂದರ್ಭದಲ್ಲಿ ವಾಧ್ಯಗಾರರು ವಾಧ್ಯ ನುಡಿಸುತ್ತಾರೆ. ಹೆಂಗಳೆಯರು ಸೋಬಾನೆ ಹಾಡುತ್ತಿರುತ್ತಾರೆ. ರೇಖಾ ಚಿತ್ರದಮೇಲೆ ಎರಡು ಹಸೆಮಣೆಗಳನ್ನಿಡು ಅದರ ಮೇಲೆ ಬಿಳಿ ವಸ್ತ್ರವನ್ನು ಹಾಸುತ್ತಾರೆ. ಆಗ ಹಸೆ ಸಿದ್ಧವಾಗುತ್ತದೆ. ಮೊದಲು ಗಂಡನ್ನು ಹಸೆಗೆ ಕರೆದು. ಮನೆ ದೇವರು ಮತ್ತು ಹಿರಿಯರು, ಹಾಗೂ ಕಳಶಗಳಿಗೆ ನಮಸ್ಕರಿಸುವಂತೆ ಹೇಳಿ ಹಸೆಮಣೆಯ ಹಿಂದಿನಿಂದ ಬಲಗಾಲು ಮುಂದೆ ಮಾಡಿ ಮಾಣೆ ದಾಟಿ ನೆಲದಮೇಲೆ ಕೈ ಊರಿ ಕುಳಿತುಕೊಳ್ಳುತ್ತಾನೆ. ಆತನ ಪಕ್ಕದ ಮಣೆಯ ಮೇಲೆ ಒಂದು ಬಿದಿರು ಕೊಳವೆಯಲ್ಲಿ ಭತ್ತ ತುಂಬಿ ಹೆಣ್ಣಿನ ಪ್ರತಿರೂಪವಾಗಿ ಇಡುವರು. ಶಾಸ್ತ್ರಕ್ಕೆ ನಿಂತಿದ್ದ ಹೆಂಗಳೆಯರು ಗಂಡಿನ ಮುಂದೆ ಕುಂದಲಿಕೆ ಇಟ್ಟು, ಹಿಂದೆ ಕುಂದಲಿಕೆ ಶಾಸ್ತ ಮಾಡಿದಂತೆ ಪುನಃ ಮಾಡುತ್ತಾರೆ. ನಂತರ ಗಂಡಿಗೆ ಕಳಶಕ್ಕೆ ಹಾಗೂ ಪಡಿಗೆ ಒಬ್ಬರಾದ ಮೇಲೊಬ್ಬರಂತೆ ಸೇಸೇವು ಇಡುತ್ತಾರೆ. ಇಲ್ಲಿಯು ಪಡಿಯು ಹೆಣ್ಣಿನ ಸ್ಥಾನವನ್ನು ತುಂಬುತ್ತದೆ. ನಂತರ ವರನನ್ನು ಪಕ್ಕದ ಕೋಣೆಗೆ ಕಳಿಸಿ, ವಧುವನ್ನು ಕರೆದು ಅಕೆಗೂ ಅದೇ ರೀತಿ ಹಸೆ ಹಚ್ಚುತ್ತಾ ಸೋಭಾನೆ ಪದ ಹಾಡುತ್ತಾರೆ. "ಹಸೆಗೆ ಬಾರೇ ಕುಸುಮ ನೇತ್ರೆ........." ಎಂಬುದಾಗಿ ಹಾಡುತ್ತಾರೆ.

**ತುಪ್ಪದ ಹಸೆ ಬರೆಯುವುದು :**

ಅಕ್ಕಿಯಿಂದ ಬರೆದಿದ್ದ ಹಸೆಯನ್ನು ಒಂದು ಬಟ್ಟೆಯಲ್ಲಿ ಒತ್ತಿ ಎತ್ತಿಟ್ಟು ನೆಲವನ್ನು ಸ್ವಚ್ಛಗೊಳಿಸುತ್ತಾರೆ. ನಂತರ ಒಂದು ಲೋಟದಲ್ಲಿ ತುಪ್ಪವನ್ನು ತೆಗೆದುಕೊಂಡು ಹಿಂದೆ ಬರೆದಂತೆ ನೆಲದ ಮೇಲೆ ಹಸೆ ಬರೆಯುತ್ತಾರೆ. ಅದರ ಮೇಲೆ ಮೊದಲು ಗಂಡನ್ನು ಕರೆದು ಕೂರಿಸುತ್ತಾ ಹಾಡುತ್ತಾರೆ.

"ಅಂಗಾಳ ಸಾರಿಸಿ ಲಿಂಗಾವ ಬೆಳಗ್ಯಾರೆ
ತುಪ್ಪಾದ ಹಸೆಯ ಬರೆದಾರೆ / ನಮ್ಮನೆಯ
ಬಾಲಾನಾ ಮದುವೆ ಮನೆಯಾಗೆ
ಹರಿವಾಣ ಬೆಳಗಿ, ಮುತ್ತೀನ ರಂಗೋಲಿಯಲ್ಲಿ
ಅಪ್ಪಾಜಿ ನೀನು ಬರಬೇಕು / ನಮ್ಮನೆಯ
ತುಪ್ಪಾದ ಹಸೆಯ ಬರೆದೇನು.
ಪುತ್ರಯ್ಯ ಬಂದು ಶರಣೆಂದು
ಅಕ್ಕ ತಂಗೇರು ತುಪ್ಪಾವಾಗರುಂಡು ......... "ಎಂದು ಹಾಡುತ್ತಾರೆ.

ಹೀಗೆ ಹಾಡುತ್ತಿರುವಾಗ ಗಂಡು ಹಸೆಯಮೇಲೆ ಕೂರುತ್ತಾನೆ. ಗಂಡಸರು ಹೆಂಗಸರೆಲ್ಲಾ ಸೇಸೆ ಇಡುತ್ತಾರೆ. ಒಂದು ಕಂಚಿನ ಗಂಗಳದಲ್ಲಿ "ಬೂವ" ಇಟ್ಟು ಮಂತ್ತೊಂದು ಗಂಗಳದಲ್ಲಿ ಬೊರಲು ಮುಚ್ಚಿ, ಒಬ್ಬ ಗಂಡಸು, ಒಬ್ಬ ಹೆಂಗಸು ಕತ್ತರಿಕೈಯಲ್ಲಿ ಅದನ್ನು ತಂದು ಗಂಡಿನ ಮುಂದೆ ಇಟ್ಟಾಗ ವರನು ಎರಡೂ ಕೈಗಳಿಂದ ಅದನ್ನು ಮುಟ್ಟಿ ಶರಣೆನ್ನುವನು. ನಂತರ ಆಬೂವವನ್ನು ಅಲ್ಲಿಂದ ತೆಗೆದು ಆಚೆಗೆ ಎಸೆಯುವರು. ಗಂಡನ್ನು ಎಬ್ಬಿಸಿ ಆತನ ಕೋಣೆಗೆ ಕಳುಹಿಸಿ ಹೆಣ್ಣನ್ನು ಕರೆದು ಆಕೆಗೂ ಇದೇ ರೀತಿ ಮಾಡುತ್ತಾರೆ.

ಈ ಸಂದರ್ಭದಲ್ಲಿ ಕುಲಬಾಂಧವರು ಆಪ್ತೇಷ್ಟರು ತಾವು ತಂದಿರುವ ಬಟ್ಟೆಗಳನ್ನು ಗಂಡು ಹೆಣ್ಣುಗಳ ತಂದೆ, ತಾಯಿಗಳಿಗೆ ನೀಡುತ್ತಾರೆ. ಅವುಗಳಲ್ಲಿ ಸೀರೆ, ಪಂಚೆ, ಅಂಗಿ, ಟವಲ್ಲುಗಳು ಮುಖ್ಯವಾಗಿರುತ್ತವೆ. ಹೀಗೆ ಗಂಡು ಹೆಣ್ಣುಗಳಿಗೆ ಬೇರೆ ಬೇರೆಯಾಗಿ ಹಸೆ ಶಾಸ್ತ್ರ ಮುಗಿಸಿದ ಮೇಲೆ ಅವರನ್ನು ಕೋಣೆಗೆ ಕಳುಹಿಸಿ ಹಸೆಯನ್ನು ಪೂಜಿಸುತ್ತಾರೆ.

**ಅರಿಶಿಣ ಹಚ್ಚುವ ಶಾಸ್ತ್ರ:**

ಈ ಶಾಸ್ತ್ರವು ಮದುವೆಯಲ್ಲಿ ಬಹಳ ಮುಖ್ಯವಾದುದು. ಎರಡು ಹಸೆಮಣೆಗಳನ್ನು ಹಾಕಿ ಅದರ ಮೇಲೆ ಬಿಳಿ ವಸ್ತ್ರ ಹಾಸುತ್ತಾರೆ. ಮೊದಲು ಗಂಡನ್ನು ಕರೆದು ಅಲ್ಲಿ ನೆರೆದಿರುವವರಲ್ಲಿ ಸಂಬಂಧಿಗಳಾದವರು ಒಬ್ಬ ಪುರುಷನೂ ಸೀರೆ ಒಟ್ಟು ಐದು ಜನರು ಗಂಡಿನ ಕೈ ಕಾಲು, ಕೆನ್ನೆ ಹಾಗೂ ಮೈಗೆ ಅರಿಶಿನ ಹಚ್ಚುತ್ತಾರೆ. ಹೀಗೆ ಮೂರು ಬಾರಿ ಮಾಡುತ್ತಾರೆ. ಇತ್ತ ವಾದ್ಯದವರ ವಾದ್ಯ ನುಡಿಸುತ್ತಿರುತ್ತಾರೆ, ಅತ್ತ ಸೊಬಾನೆಯವರು ಹಾಡುತ್ತಿರುತ್ತಾರೆ.

"ಅಂದಲಂದಲೆ ತನ್ನಿ ಗಂಧದಲಗೆ ತನ್ನಿ
ನಾವೊಂದ್ಯೆವರು ನೀವೊಂದ್ಯೆವರು
ದೇವಗನ್ನಿಕೆಯರು, ಚನ್ನಗಿರಿ ರಾವಣರು,
ಶಿವನ ಕುಮಾರಗೆ, ಎಣ್ಣೆ ಒತ್ತಲು ಬನ್ನಿರೆ
ಹಾಲಹಲವೆ ತನ್ನಿ, ಹಾಲದಲಿಗೆ ತನ್ನಿ
ನಾವೊಂದ್ಯೆವರು, ನೀವೊಂದ್ಯೆವರು
ದೇವಗನ್ನಿಕೆಯರು, ಚನ್ನಗಿರಿ ರಾವಣರು
ಶಿವನ ಕುಮಾರಗೆ ಅರಿಶಿಣ ಹಚ್ಚಲು ಬನ್ನಿರೆ"...........ಎಂದು ಹಾಡುತ್ತಿರುವರು.

ಹೀಗೆ ಹೆಣ್ಣಿಗೂ ಸಹ ಮೂರು ಬಾರಿ ಅರಿಶಿಣ ಹಚ್ಚಿ, ನಂತರ "ಬೂವ" ತಿನ್ನುವ ಶಾಸ್ತ್ರ ನಡೆಯುತ್ತದೆ. ಬಾಳೆಹಣ್ಣು, ತುಪ್ಪ, ತಂಬಿಟ್ಟುಗಳನ್ನು ಕಲಸಿ ಗಂಗಳದಲ್ಲಿಟ್ಟು ತಟ್ಟೆ ಬೋರಲು ಹಾಕಿಕೊಂಡು ಹೆಣ್ಣುಗಂಡುಗಳ ಮುಂದಿಟ್ಟು ಅವರವರ ಕಡೆಯ ಮಕ್ಕಳನ್ನು ಕರೆದು "ಬೂವ" ಉಣ್ಣಿಸುತ್ತಾರೆ.

**ಮಲನೀರು ಶಾಸ್ತ್ರ:**

ಅರಿಶಿಣ ಶಾಸ್ತ್ರ ಮುಗಿದ ಮೇಲೆ ಕುಂಬಾರರ ಮನೆಯಿಂದ ತಂದ ಅರಿವಿಗಳಲ್ಲಿರುವ ನೀರನ್ನು ಕಾಯಿಸಿ ಮನೆ ಮುಂದಿನ ಚಪರದಡಿಯಲ್ಲಿ ಮಣೆಗಳನ್ನು ಹಾಕಿ ಗಂಡು ಮತ್ತು ಹೆಣ್ಣನ್ನು ಪ್ರತ್ಯೇಕವಾಗಿ ಒಬ್ಬರಾದ ಮೇಲೊಬ್ಬರಂತೆ ಸ್ನಾನ ಮಾಡಿಸಿದ ಮೇಲೆ, ಅದೇ ಚಪ್ಪರದಡಿಯಲ್ಲಿ ಮಣೆ ಹಾಕಿ ಗಂಡನ್ನು ಮತ್ತು ಆತನ ವಯಸ್ಸಾದ ಸೋದರತ್ತೆಯನ್ನು ಕೂಡಿಸುತ್ತಾರೆ. ಅವರ ಸುತ್ತು ಸಪ್ಪೆ ನೂಲನ್ನು ಮೂರು ಸುತ್ತ ಹಾಕಿ ಊದುಕಡಿ ಹಚ್ಚಿ ಪೂಜಿಸುತ್ತಾರೆ. ನಂತರ ಇಬ್ಬರೂ

ಸ್ವಲ್ಪ ಬಾಗಿದಾಗ ಕುಡಿಕೆಯಲ್ಲಿರುವ ಅರಿಶಿಣದ ನೀರನ್ನು ಬಲಗಡೆಯಿಂದ ಎಡಗಡೆಗೆ ನೀವಾಳಿಸಿ ಪಕ್ಕಕ್ಕೆ ಸುರಿಯುತ್ತಾರೆ. ಅಲ್ಲಿ ಶಾಸ್ತ್ರಕ್ಕೆ ನಿಂತ ಸೋದರತ್ತೆಗೆ ಸೀರೆ ಕುಪ್ಪಸ ನೀಡಿ ಗೌರವಿಸುತ್ತಾರೆ.

**ಬಾಸಿಂಗ ಕಟ್ಟುವುದು:**

ಬಾಸಿಂಗ ಎಂದರೆ ಕಬ್ಬಿನ ಆಕಾರ ರೂಪವಿರುವ ಒಂದು ಬೆಂಡುದಂಟನ್ನು ತೆಗೆದು ಒಣಗಿಸಿ, ಅದನ್ನು ಸೀಳಿ ಹೂವಿನ ಗರಿಯಂತ ಕತ್ತರಿಸಿ, ಅದಕ್ಕೆ ಮೇಲೆ ತಳುಕು ಕಾಗದ ಸೇರಿಸಿ ವೃತ್ತಾಕಾರದಲ್ಲಿ ಹೂವಿನೋಪಾದಿಯಲ್ಲಿ ತಯಾರಿಸಿ ವೈಷ್ಣವ ಅರ್ಚಕರು ತಂದುಕೊಡುತ್ತಾರೆ. ಗಂಡಿಗೆ ಬಿಳಿಯ ಹೊಸ ಉಡುಪುಗಳನ್ನು ತೊಡಿಸಿ, 16 ಮೊಳದ ಬಿಳಿ ಪಂಚೆಯನ್ನು ಕಚ್ಚೆ ಕಟ್ಟುತ್ತಾರೆ. ಸಲಗೆ ರೇಷ್ಮೆ ನೂಲಿನಿಂದ ತಯಾರಿಸಿದ ಬಂಗಾರದ ಬಣ್ಣದಿಂದ ಕೂಡಿದ ಕಂಬಿ ಪೇಟ ಕಟ್ಟಿ, ಹೆಗಲ ಮೇಲೆ ಶಲ್ಯವನ್ನು ಹಾಕಿ ಶೃಂಗರಿಸುತ್ತಾರೆ. ಕೊರಳಿಗೆ ಬಂಗಾರದ ಚೈನು ಕೈಗೆ ಉಂಗುರ ಹಾಕುತ್ತಾರೆ. ಬಾಳೆ ಎಲೆಯನ್ನು ಸೀಳಿ ಹಣೆಯ ಮೇಲಿಟ್ಟು ಮೂರು ವಿಭೂತಿ ಗೆರೆ ಎಳೆಯುತ್ತಾರೆ. (ಕೆಲವರು ಎರಡು ಬಿಳಿ, ಒಂದು ಕೆಂಪು ಬಣ್ಣದಿಂದ ಕೂಡಿದ ನಾಮವನ್ನು ಹಾಕುವುದುಂಟು). ನಂತರ ಸೋದರ ಮಾವ ಬಾಸಿಂಗ ಕಟ್ಟುತ್ತಾನೆ. ಈ ಬಾಸಿಂಗವನ್ನು ದಿಬ್ಬಣದಲ್ಲಿ ಇಟ್ಟಿರುವರು. ಆ ಬಿದಿರಿನ ಗೂಡೆಯಲ್ಲಿ ಎಲೆ, ಅಡಿಕೆ, ಬೆಲ್ಲ, ಅಕ್ಕಿ, ಬಳೆ, ವಿಭೂತಿ, ಅರಿಶಿಣ ಕುಂಕುಮ ಇಟ್ಟಿರುತ್ತಾರೆ. ಇದನ್ನು ಗಂಡಿನ ಅಕ್ಕ ಅಥವಾ ತಂಗಿಯರೋ, ಇಲ್ಲ ಆತನ ಚಿಕ್ಕಪ್ಪ ದೊಡ್ಡಪ್ಪನ ಮಕ್ಕಳು ಹೊರುವ ವಾಡಿಕೆಯಿದೆ.

**ಉಡುಕೆ ಗೂಡೆ:**

ಒಂದು ಬಿದಿರಿನಿಂದ ತಯಾರಿಸಿದ ಗೂಡೆಗೆ ಗಂಜಲ ಚಿಮುಕಿಸಿ ಅದರ ಸುತ್ತ ವಿಭೂತಿ ಗೆರೆ ಎಳೆದು, ಅದರೊಳಗೆ ಮಾಂಗಲ್ಯ, ಹೆಣ್ಣಿನ ಸೀರೆ ಕುಬುಸ, ಚಿಗಳಾ ತಂಬಿಟ್ಟು ತೆಂಗಿನ ಕಾಯಿ, ಬಾಳೆಹಣ್ಣು ಅಕ್ಕಿ ಬೆಲ್ಲ, ಅರಿಶಿಣ ಕುಂಕುಮ ವಿಭೂತಿ ಘಟ್ಟಿ, ಬಳೆ ಬಿಚ್ಚೋಲೆ ಹಾಗೂ ಹೆಣ್ಣಿಗೆ ಕೊಡಬೇಕಾದ ವಡವೆಗಳನ್ನು ಇಟ್ಟಿರುತ್ತಾರೆ. ಇದನ್ನೇ "ಉಡುಕೆ ಗೊಡೆ" (ದಿಬ್ಬಣದ ಹೆಡಿಗೆ) ಎಂದು ಕರೆವರು. ಇದನ್ನು ಗಂಡು ಬೀಡು ಬಿಟ್ಟಿರುವ ಮನೆಯಲ್ಲಿ ಇಟ್ಟಿರುತ್ತಾರೆ.

**ಕಂಕಣ ಕಟ್ಟುವುದು:**

ಕಂಕಣವು ಯಾವುದೇ ಶುಭ ಕಾರ್ಯವನ್ನು ಮಾಡುವಾಗ ಈ ಕಂಕಣವನ್ನು ಶುಭದ ಸಂಕೇತವಾಗಿ ಕಟ್ಟುತ್ತಾರೆ. ಕುರಿಯ ಉಣ್ಣೆಯಿಂದ ಮಾಡಿದ ದಾರಕ್ಕೆ ಅರಿಶಿಣದ ಕೊನೆ ಅಥವಾ ಬೊಟನ್ನು ಕಟ್ಟಿ ಗಂಡಿನ ಸೋದರ ಮಾವ ಗಂಡಿಗೆ, ಹೆಣ್ಣಿನ ಸೋದರ ಮಾವ ಹೆಣ್ಣಿನ ಕೈಗೆ ಕಟ್ಟುವುದನ್ನು ಕಂಕಣ ಕಟ್ಟುವುದು ಎನ್ನುವರು.

**ತಾಳಿ (ಮಾಂಗಲ್ಯ):**

ತಾಳಿಯನ್ನು ಮೂರು ಮುಕ್ಕಾಲು ಗ್ರಾಂತೂಕದ ಚಿನ್ನದಲ್ಲಿ ಮಾಡಿಸುತ್ತಾರೆ. ವಡವೆಗಳನ್ನು ಮಾಡುವ ಅಕ್ಕ ಸಾಲಿಗರ ಬಳಿ ಹೋಗಿ ತಾಳಿಯನ್ನು ಮಾಡಲು ಹೇಳಿ ಬರುವರು. ಇದನ್ನು ಗಂಡಿನ ಕಡೆಯವರು ಮಾಡಿಸುತ್ತಾರೆ. ಹಾಗೆ ತವರು ಮನೆಯವರು ಹುಟ್ಟು ತಾಳಿ ಎಂಬುದನ್ನು ಆಕೆಗೆ ಕೊಡುತ್ತಾರೆ. ಈ ತಾಳಿಯಲ್ಲಿ ಎರಡು ವಿಧ ಬಂದು "ಜಾಗಟೆ" ತಾಳಿ ಎಂತಲೂ, ಮತ್ತೊಂದು ಗುಂಡಿನ ತಾಳಿ ಎಂದು ತಾಳಿಯ ಮಧ್ಯ ಭಾಗದಲ್ಲಿ ಗುಂಡಿನಾಕರವಾಗಿ ಉಬ್ಬಿರುತ್ತದೆ. ಈ ಜಾಗದಲ್ಲಿ ಕೆಲವರು ಹರಳನ್ನು ಹಾಕಿಸಿ ಮಾಡಿಸಿರುತ್ತಾರೆ. ಈ ತಾಳಿಯು ಐದು ಮುತ್ತುಗಳೊಲ್ಲೊಂದು ಎಂದು ತಿಳಿಯಬಹುದು.

**ಗಂಡು ಹೆಣ್ಣುಗಳ ಉಡುಗೆಗಳು: (ಕಚ್ಚೆ, ಪಂಚೆ ಧಾರೆಸೀರೆ ಉಡುವುದು)**

ಗಂಡಿಗೆ ಬಿಳಿಯ ಅಂಗಿ, ಬಿಳಿಯ ಪೇಟ ಹಾಗು ಹೆಗಲ ಮೇಲೆ ಉತ್ತರೀಯವನ್ನು (ಶಲ್ಯ) ವನ್ನು ಹಾಕಿರುತ್ತಾರೆ. 16 ಮೊಳದ ಪಂಚೆಯನ್ನು ಹಿರಿಯ ಅನುಭವಿಗಳು ನಾಜೂಕಾಗಿ ನೆರಿಗೆಗಳು ಕಾಣುವಂತೆ ಉಡಿಸುತ್ತಾರೆ. ಜರಿಯ ಅಂಚಿನ ವಸ್ತ್ರದಲ್ಲಿ ತಲೆಗೆ ಪೇಟವನ್ನು ಸುತ್ತುತ್ತಾರೆ. ಇದನ್ನು ಕಂಬೀಪೇಟ, ಜರೀಪೇಟ ಮಹಾರಾಜ ಪೇಟ ವೆಂತಲೂ ಕರೆಯುವರು. ಸಾಮಾನ್ಯವಾಗಿ ಮೈಮೆಲೆ ಕಪ್ಪನೆಯ ಕೋಟು, ಕೈಯಲ್ಲಿ ಕೊಡೆ ಹಾಗೂ ಹೂವಿನ ದಿಂಡನ್ನು ಹಿಡಿದ ವರನು ಮಧು ಮಗನ ರೂಪವನ್ನು ಪಡೆಯುವನು.

ಹೆಣ್ಣಿಗೆ ಗಂಡಿನವರು ತಂದಿರುವ ಬಣ್ಣ/ ಸೀರೆಯನ್ನು ಉಡಿಸುವರು. ಬಿಳಿಯ ಬಣ್ಣದ ಸೀರೆ, ರವಿಕೆ ತೊಡಿಸಿ ಒಡವೆಗಳನ್ನು ಹಾಕಿ, ಹೂ ಮುಡಿಸಿ ಕೈತುಂಬ ಕರಿ ಬಳೆಗಳನ್ನು ತೊಡಿಸಿ ಅಲಂಕರಿಸಿ ತಲೆಯ ಮೆಲೊಂದು ಮುಸುಕನ್ನು ಹಾಕಿ ಸಿಂಗರಿಸುತ್ತಾರೆ. ಆಗ ವಧುವಣಗಿತ್ತಿಯಂತೆ ಅಲಂಕಾರಗೊಂಡು ಕಂಗೊಳಿಸುತ್ತಾಳೆ.

**ಕಾಲುಂಗುರ:**

ಕಾಲುಂಗುರವನ್ನು ಬೆಳ್ಳಿಯಲ್ಲಿ ಮಾಡಿಸುತ್ತಾರೆ. ಇದನ್ನು ಹೆಣ್ಣಿನ ಸೋದರ ಮಾವನು ಹೆಬ್ಬೆರಳಿನ ಪಕ್ಕದ ಬೆರಳಿಗೆ ತೊಡಿಸುವುದುಂಟು. ಹಾಗೆಯೇ ಗಂಡಿಗೆ ಮಿಂಚುಗಳನ್ನು ತೊಡಿಸುವುದುಂಟು. ಇದನ್ನು ಗಂಡಿನ ಸೋದರ ಮಾವ ಹೆಬ್ಬೆರಳಿನ ಪಕ್ಕದ ಬೆರಳಿಗೆ ತೊಡಿಸುತ್ತಾನೆ. ಮದುವೆಯಾದ ಸುಮಾರು ಒಂಬತ್ತು ಅಥವಾ ಹನ್ನೊಂದನೇ ದಿನದ ವರೆಗೂ ಗಂಡಿನ ಬೆರಳುಗಳಲ್ಲಿ ಈ ಮಿಂಚುಗಳಿರುತ್ತವೆ. ನಂತರ ಅವುಗಳನ್ನು ತೆಗೆಯುತ್ತಾರೆ. ಈ ಕಾಲುಂಗರವು ಹೆಣ್ಣಿಗೆ ಐದು ಮುತ್ತುಗಳಲ್ಲಿ ಒಂದೆಂದು ತಿಳಿಯಬಹುದು.

**ಉಡಿಕೆ ನಡೆಯುವುದು :**

ಸುಮಾರು ಐದಾರು ತಟ್ಟೆಗಳಲ್ಲಿ ಹಣ್ಣು, ಕಾಯಿ, ಎಲೆ ಅಡಿಕೆ, ಸೀರೆ, ಕುಪ್ಪಸ, ಹೂಗಳನ್ನು ಜೊಡಿಸಿಕೊಂಡು, ಕಳಸದವರ ಜೊತೆಗೂಡಿ ವಾದ್ಯಸಮೇತವಾಗಿ ಗಂಡು ಹೆಣ್ಣುಗಳು ಇರುವ ಜಾಗಕ್ಕೆ ಮೂರರಿಂದ ಐದು ಬಾರಿ ಹೋಗಿ ಅವರಿಗೆ ಮುಟ್ಟಿಸಿ ಶರಣೆನ್ನಿಸುವುದನ್ನು ಉಡಿಕೆ ನಡೆಯುವುದು ಎನ್ನುವರು. ಈ ಸಮಯಕ್ಕೆ ಮದುವೆಗೆ ಬಂದವರೆಲ್ಲ ಹೊಸ ಬಟ್ಟೆಬರೆ ಒಡವೆಗಳನ್ನು ತೊಟ್ಟು ಸಂಭ್ರಮದಿಂದ ಓಡಾಡುತ್ತಿರುತ್ತಾರೆ.

**ಧಾರೆ ಕಂಬ ತರುವುದು (ಹಾಲುಗಂಬ ತರುವುದು):**

ಕೆಲವರು ಪ್ರಥಮ ಶಾಸ್ತ್ರದ ದಿನವೇ ಧಾರೆಕಂಬ ತರುವರು. ಮತ್ತೆ ಕೆಲವರು ಮುಹೂರ್ತದ ದಿನ ಬೆಳಿಗ್ಗೆ ತರುವುದುಂಟು. ಇಬ್ಬರು ಗಂಡಸರು ಹೆಣ್ಣಿಗೆ ನೆಂಟರಾಗುವಂತ, ಬೇರೆ ಬೇರೆ ಬೆಡಗುಗಳಿಗೆ ಸೇರಿದವರು ಒಂದು ತಟ್ಟೆಯಲ್ಲಿ ಪೂಜೆ ಸಾಮಾನು, ತಾಂಬೂಲಗಳನಿಟ್ಟುಕೊಂಡು, ಒಂದು ಕೂಡಲಿ, ಎರಡು ಮಚ್ಚುಗಳನ್ನು ತೆಗೆದುಕೊಂಡು ಊರಿನ ಪಕ್ಕದಲ್ಲಿರುವ ಹತ್ತಿ ಮರಕ್ಕೆ ಮೂಜೆ ಸಲಿಸುತ್ತಾರೆ. ನಂತರ ಆಯುಧಗಳನ್ನು ಪೂಜಿಸಿ, ತಾವುಗಳು ಕುಂಕುಮ ಹಚ್ಚಿಕೊಂಡು ಕೊರಳಿಗೆ ಹೂವಿನ ಹಾರ ಹಾಕಿಕೊಂಡು ಹತ್ತಿಕೊನೆ, ಅರಳೀಕೊನೆ/ ಹೊಂಗೆ ಕೊನೆ, ಎರಡು ಹತ್ತಿಯ ಮಣೆಗಳ ಸಮೇತ ಮನೆಯ ಎದುರಿಗೆ ಇಟ್ಟಿರುತ್ತಾರೆ. ಮುಹೂರ್ತದ ವೇಳೆಗೆ ವಾದ್ಯ ಸಮೇತ ತಂದು ಚಪ್ಪರದ ಕೆಳಗೆ ಸೆಗಣಿಯಿಂದ ಸಾರಿಸಿ, ರಂಗೋಲಿ ಬಿಟ್ಟು ಗುಂಡಿಯನ್ನು ತೊಡಿ ಹಾಲನುನ ಬಿಟ್ಟು ಅಕ್ಷತೆ ಹಾಕಿ ಧಾರೆ ಕಂಬವನ್ನು ನೆಡುತ್ತಾರೆ. ಅಲ್ಲಿ ಮಡಿವಾಳರು ಒಂದು ಬಿಳಿ ಪಂಚೆಯಲ್ಲಿ ಎಲೆ ಅಡಿಕೆ, ಅಕ್ಕಿ ಬೆಲ್ಲ, ಹಣ್ಣು ಕಾಯಿಗಳಿಂದ ಕಟ್ಟಿದ ಗಂಟನ್ನು ಧಾರೆಕಂಬಕ್ಕೆ ಕಟ್ಟುವರು. ಇತ್ತ ಬೆಳಿಗ್ಗೆಯೆ ಬಂದಿರುವಂತ ಪುರೋಹಿತರು ಮುಹೂರ್ತಕ್ಕೆ ಬೇಕಾದ ಸಕಲ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ನಡು ಮನೆಯಲ್ಲಿ ನವಗ್ರಹ ಮತ್ತು ಪಂಚಕಲಶ ಪೂಜಿಸಿ ಮಂತ್ರೋಚ್ಚಾರಣೆ ಮಾಡುತ್ತಾರೆ. ನಿಗದಿತ ಶುಭ ಸಮಯಕ್ಕೆ ಮುಹೂರ್ತ ನಡೆಯುವಂತೆ ಎಲ್ಲವನ್ನು ಅಣಿಗೊಳಿಸಿರುತ್ತಾರೆ.

**ಸೆರಗಾಲು ಬಿಡಿಸುವುದು:**

ಗಂಡು ಹೆಣ್ಣುಗಳಿಗೆ ಸೋದರ ಮಾವರಾದವರು ಸೆರಗಾಲು ಬಿಡಿಸುತ್ತಾರೆ. ಇದು ಸೋದರ ಮಾವಂದಿರಿಗೆ ಸಿಗುವ ಗೌರವ. ನಡು ಮನೆಯಲ್ಲಿ ಶಾಸ್ತ್ರ ಮಾಡುವ ಜಾಗದಲ್ಲಿ ಕುಕ್ಕುರುಗಾಲಲ್ಲಿ ಕುಳ್ಳಿರಿಸುತ್ತಾರೆ. ಒಂದು ಪಡಿಯಲ್ಲಿ ಭತ್ತ ತುಂಬಿ ಒಂದು ಗೆಜ್ಜೆ ಭತ್ತಿ ಹಚ್ಚಿ ಇಟ್ಟಿರುತ್ತಾರೆ. ಕೆಲವರು ಮನೆಯ ತಲೆಬಾಗಿಲಿನ ಹೊಸ್ತಿಲ ಮೇಲೆ ಕುಳ್ಳಿರಿಸಿ ಈ ಶಾಸ್ತ್ರ ಮಾಡುತ್ತಾರೆ. ಸೋದರ ಮಾವ ಕೈಗೆ ಕಂಕಣ ಕಟ್ಟುತ್ತಾನೆ. ಕುರಿದಾರಕ್ಕೆ ಅರಿಶಿಣದ ಕೊನೆ, ಭಜೆ ಉಂಗುರ ಕಟ್ಟಿ ಕೈಗೆ ಕಟ್ಟುತ್ತಾರೆ. ಮತ್ತೊಂದು ಅರಿಶಿಣ ಕೊನೆ ಅಲಗು, ಗರಿಕೆಯನ್ನು ಎರಡೂ ಕೈಗಳನ್ನು ಜೋಡಿಸಿ ಹೆಬ್ಬೆರಳುಗಳಿಗೆ ಕಟ್ಟುತ್ತಾರೆ. ಗಂಡು ಮತ್ತು ಸೋದರ ಮಾವ ಇಬ್ಬರ ಮೇಲೂ ಬಿಳಿ ಪಂಚೆಯನ್ನು ಹೊದಿಸುತ್ತಾರೆ. ಹೆಬ್ಬೆರಳಿಗೆ ಕಟ್ಟಿರುವ ದಾರವನ್ನು ಕತ್ತರಿಸಿ ಸೆರೆ ಬಿಡಿಸುತ್ತಾನೆ. ನಂತರ ಗಂಡನ್ನು ತನ್ನ ಎದೆ ಮಟ್ಟಕ್ಕೆ ಎತ್ತಿಕೊಂಡು ಹಿಮ್ಮುಕವಾಗಿ ಬಂದು ಭತ್ತ

ತುಂಬಿದ ಪಡಿಯನ್ನು ಒದೆಯುತ್ತಾನೆ. ಈ ಸಂದರ್ಭದಲ್ಲಿ ವರಸೆಯ ಹೆಂಗಸರು ಸೋದರ ಮಾವನನ್ನು ಅಣಕಿಸುತ್ತಾರೆ. ಸೆರೆಗಾಲು ಬಿಡಿಸಿದ ಸೋದರ ಮಾವನಿಗೆ ಗಂಡಿನ ತಂದೆ ತಾಯಿಯರು ಬಟ್ಟೆಗಳನ್ನು ನೀಡಿ ಗೌರವಿಸುತ್ತಾರೆ.

ಈ ಕಡೆ ಹೆಣ್ಣಿಗೆ ಮಲನೀರು ಶಾಸ್ತ್ರ ಮುಗಿಸಿ, ಸ್ನಾನ ಮಾಡಿಸಿ ಸಿಂಗರಿಸಿ ಉಡಿಕೆ ಶಾಸ್ತ್ರವನ್ನು ಮುಗಿಸಿದ ಮೇಲೆ ಹೆಣ್ಣಿನ ಸೋದರ ಮಾವ ಗಂಡಿಗೆ ಬಿಡಿಸಿದಂತೆ ಸೆರಗಾಲು ಬಿಡಿಸುತ್ತಾನೆ. ಹಂಗೀನ ಸೆರೆ ಹರಿತಾ ಎಂದು ಕೇಳಿದಾಗ ಹೆಣ್ಣು "ಹರೀತು" ಎಂದು ಮೂರುಸಾರಿ ಹೇಳಿದ ಮೇಲೆ ಎದೆ ಮಟ್ಟಕ್ಕೆ ಎತ್ತಿ ಹಿಮ್ಮುಖವಾಗಿ ನಡೆದು ಪಡಿಒದೆಯುತ್ತಾನೆ. ನಂತರ ಸೋದರ ಮಾವನಿಗೆ ಹೆಣ್ಣಿನ ತಂದೆ ತಾಯಿ ಹೊಸ ಬಟ್ಟೆ ನೀಡಿ ಗೌರವಿಸುತ್ತಾರೆ. ಈ ಸಂದರ್ಭದಲ್ಲಿ ಹೆಣ್ಣಿನ ತಾಯಿಗೆ "ತಾಯುಡಿಕೆ ಸೀರೆ" ಕೊಟ್ಟು ಗೌರವಿಸುತ್ತಾರೆ.

**ಬಿಡದಿ ಮನೆಯಿಂದ ಧಾರೆ ಮಂಟಪಕ್ಕೆ ಗಂಡನ್ನು ಕರೆತರುವುದು:**

ಅಲಂಕೃತವಾದ ಗಂಡನ್ನು ಎರಡೂ ಕಡೆಯವರು ಬಿಡದಿ ಮನೆಯಿಂದ ಧಾರೆ ಮಂಟಪಕ್ಕೆ ಕಳಸ, ವಾದ್ಯ ಸಮೇತ ಕರೆದುಕೊಂಡು ಬರುವರು. ಗಂಡಿಗೆ "ತಳಿ" ಹಿಡಿದಿರುತ್ತಾರೆ. ಜೊತೆಯಲ್ಲಿ ಉಡಿಕೆಗೂಡೆ / ದಿಬ್ಬಣದ ಹೆಡಿಗೆಯನ್ನು ಹೊತ್ತ ಗಂಡಿನ ತಂಗಿ ಅಥವಾ ಅಕ್ಕ ಹೋಗುತ್ತಾಳೆ. ಪಂಚಾರತಿಯನ್ನು ಮುತ್ತೈದೆಯವರು ಹಿಡಿದಿರುತ್ತಾರೆ. ಹೀಗೆ ಮಧುಮಗನನ್ನು ಕರೆತಂದು ಪೂರ್ವಾಭಿ ಮುಖವಾಗಿ ನಿಲ್ಲಿಸುತ್ತಾರೆ. ನಂತರ ಕಳಸದವರು ಪಕ್ಕದಲ್ಲಿ ನಿಂತು ಗಂಡಿನ ಕೈಗೆ ವೀಳ್ಯದೆಲೆ ನೀಡಿ, ಅದರ ಮೇಲೆ ಅಕ್ಷತೆಯನ್ನಿಟ್ಟು ಉದಕ (ನೀರು) ಬಿಡುತ್ತಾರೆ. ಆ ಗಂಡು ಕೈ ಮುಂದೆ ಚಾಚಿ ಅಕ್ಷತೆ ನೀರನ್ನು ಪೂರ್ವಕ್ಕೆ ಬಿಟ್ಟು ಬಲಗಡೆಯಿಂದ ಒಂದು ಸುತ್ತು ತಿರುಗಿ ವೀಳ್ಯದೆಲೆಯನ್ನು ನೆಲದ ಮೇಲೆ ಇಟ್ಟು ಸೂರ್ಯನಿಗೆ ನಮಸ್ಕರಿಸುತ್ತಾನೆ. ಹೀಗೆ ಮೂರು ಬಾರಿ ಮಾಡುವುದನ್ನೇ "ಸೂರ್ಯನಮಸ್ಕಾರ" ಎನ್ನುವರು. ಹಾಗೆಯೇ ಹೆಣ್ಣನ್ನು ಧಾರೆ ಮಂಟಪಕ್ಕೆ ಕರೆ ತರುವಾಗಲೂ ಸೂರ್ಯ ನಮಸ್ಕಾರ ಮಾಡಿಸುತ್ತಾರೆ.

**ಬೀರಕ್ಕಿ ಬೀರುವುದು:**

ಬಿಡದಿ ಮನೆಯಿಂದ ಗಂಡನ್ನು ಧಾರೆ ಮಂಟಪಕ್ಕೆ ಕರೆತರುವಾಗ ಹೆಣ್ಣಿನ ಮನೆಯವರು ವಾದ್ಯ, ಕಳಸ ನೀಲಾಂಜನ ಸಮೇತ ಎದುರುಗೊಳ್ಳುತ್ತಾರೆ. ಈಡುಗಾಯಿಗಳನ್ನು ಹೊಡೆಯುತ್ತಾ ಹಿಂದೆ ಒಳಕ್ಕೆ ಶಾಸ್ತ್ರದಲ್ಲಿ ಬಳಸಿದ ಅಕ್ಕಿಯನ್ನು ಎರಡೂ ಕಡೆಯ ಬೀಗರು ತೆಗೆದುಕೊಂಡು ಪರಸ್ಪರ ಎರಚಾಡುತ್ತಾರೆ. ಇದು ಹೆಣ್ಣಿನ ಕಡೆಯವರು ಗಂಡಿನ

ಕಡೆಯವರಿಗೂ, ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೂ ಅಕ್ಷತೆ ಹಾಕುವ ಶುಭ ಸಂಕೇತವಾಗಿದೆ. ಇದೇ ಮುಂದೆ "ಬೀರಕ್ಕಿ" ಎಂದು ಬದಲಾವಣೆಗೊಂಡಿದೆ.

**ವರಪೂಜೆ (ಕನ್ಯಾದಾನ) ಮಾಡುವುದು:**

ಬಿಡದಿ ಮನೆಯಿಂದ ಧಾರೆ ಮಂಟಪಕ್ಕೆ ಕರೆತರುವಾಗ ಗಂಡನ್ನು ಹೆಣ್ಣಿನ ಕಡೆಯವರು ಎದುರುಗೊಂಡು, ಒಂದು ಕುರ್ಚಿಯನ್ನು ಹಾಕಿ ಕೂರಿಸುತ್ತಾರೆ. ಒಂದು ಅಗಲವಾದ ತಟ್ಟೆಯನ್ನು ಇಟ್ಟು ವರನ ಕಾಲನ್ನು ಅದರೊಳಗೆ ಇಡುವಂತೆ ಹೇಳುವರು. ನಂತರ ಹೆಣ್ಣಿನ ತಂದೆ ತಾಯಿಗಳು ತಮ್ಮ ಅಳಿಯಾನಾಗುವ ವರನ ಕಾಲನ್ನು ತೊಳಯುವರು. ಆತನ ಪಾದಗಳಿಗೆ ಅರಿಶಿಣ ಕುಂಕುಮ ವಿಟ್ಟು ಹೂ ಹಾಕಿ ಊದು ಭತ್ತಿಯಿಂದ ಪೂಜೆ ಮಾಡುತ್ತಾರೆ. ಇದನ್ನೇ "ಕಾಲು ತೊಳೆಯುವ ಶಾಸ್ತ್ರ" ಎನ್ನುವರು. ನಂತರ ಕಾಲು ತೊಳೆದ ನೀರನ್ನು ಹೆಣ್ಣಿನ ತಂದೆ ತಾಯಿಗಳು ತಮ್ಮ ತಲೆ ಮೇಲೆ ತೀರ್ಥ ರೂಪದಲ್ಲಿ ಹಾಕಿಕೊಂಡು ಅಳಿಯನ ಪಾದ ಮುಟ್ಟಿ ನಮಸ್ಕರಿಸುವರು. ಅಳಿಯನೂ ಸಹ ತಮ್ಮ ಅತ್ತೆ ಮಾವನ ತಲೆಯನ್ನು ಮುಟ್ಟಿ ನಮಿಸುತ್ತಾನೆ. ನಂತರ ತಾವು ತಮ್ಮ ಅಳಿಯನಿಗೆ ಕೊಡಬೇಕಾದ "ತೆರ" ದ ರೂಪದ ಉಂಗುರವನ್ನೋ, ಕೊರಳ ಚೈನನ್ನೋ ಹಾಕುವರು ಆಗ ಗಂಡಿನ ತಂದೆ ತಾಯಿ ಹೆಣ್ಣಿನ ತಂದೆ ತಾಯಿಗೂ, ಹೆಣ್ಣಿನ ತಂದೆ ತಾಯಿ ಗಂಡಿನ ತಂದೆ ತಾಯಿಗೂ ಸೀರೆ, ಕುಬುಸು, ಪಂಚೆ, ಟವಲ್, ಶರ್ಟುಗಳನ್ನು ಕೊಡುವ ಸಂಪ್ರದಾಯವಿದೆ.

**ಧಾರೆ ಮುಹೂರ್ತ:**

ವರಪೂಜೆ ಆದ ಬಳಿಕ ಗಂಡನ್ನು ಧಾರೆ ಮಂಟಪಕ್ಕೆ ಕರೆತರುತ್ತಾರೆ. ಆಗಲೇ ಪುರೋಹಿತರು ಎಲ್ಲವನ್ನು ಸಿದ್ಧ ಪಡಿಸಿಕೊಂಡು ಮಂತ್ರಗಳನ್ನು ಹೇಳುತ್ತಿರುತ್ತಾರೆ. ಧಾರೆ ಕಂಬದ ಎರಡು ಕಡೆ ಎದುರು ಬದರಾಗಿ ಹಸೆ ಮಣೆಗಳನ್ನು ಅದರ ಪಕ್ಕದಲ್ಲಿ ಹತ್ತಿ ಮಣೆಗಳನ್ನು ಇಟ್ಟರುತ್ತಾರೆ. ಗಂಡು ಪೂರ್ವಾಭಿಮುಖವಾಗಿ ಬಲಗಾಲಿಟ್ಟು ಮಣೆಯ ಮೇಲೆ ನಿಲ್ಲುತ್ತಾನೆ. ಪುರೋಹಿತರು ಮಂತ್ರ ಹೇಳುತ್ತಾ ಅನೇಕ ಶಾಸ್ತ್ರಗಳನ್ನು ಮಾಡಿ, ಹೆಣ್ಣನ್ನು ಕರೆತರಲು ಹೇಳುತ್ತಾರೆ. ಗಂಡಿನ ಮುಂದೆ ಬಿಳಿ ವಸ್ತ್ರದ ತೆರೆಯನ್ನು ಹಿಡಿಸುತ್ತಾರೆ. ಆಗ ಪುರೋಹಿತರು "ತಾರಾ, ಮಂಡೋಧರ, ಅಹಲ್ಯ ಸೀತಾ, ದ್ರೌಪದಿ" ಹೀಗೆ ಪಂಚ ಪತಿವ್ರತಾ ಶಿರೊಮಣಿಯರ ನಾಮೋಚ್ಚಾರಣೆ ಮಾಡುತ್ತಿರಲು, ಇತ್ತ ಹೆಣ್ಣಿನ ಸೋದರಮಾವ, ಅಕ್ಕ ತಂಗಿಯರು ಅಲಂಕೃತಗೊಂಡ ಹೆಣ್ಣನ್ನು ಎರಡೂ ಕಡೆ ಕೈಗಳನ್ನು ಹಿಡಿದುಕೊಂಡು ನಿಧಾನವಾಗಿ ಕರೆತಂದು ಗಂಡಿನ ಎದುರು ಪಶ್ಚಿಮಾಭಿ ಮುಖವಾಗಿ ಮಣೆಯ ಮೇಲೆ ನಿಲ್ಲಿಸುತ್ತಾರೆ.

ಅಲ್ಲಿ ಪುರೋಹಿತರ ಮತ್ರೋಚ್ಚಾರಣೆಯು ಮುಂದುವರೆಯುತ್ತಿರುತ್ತದೆ. ಹೆಣ್ಣಿನ ಕೈಗೆ ಜೀರಿಗೆ ಬೆಲ್ಲ ಕೊಟ್ಟು ಗಂಡಿನ ತಲೆಯ ಮೇಲೆ ಎರಡೂ ಕೈಗಳಿಂದ ಹಾಕಿಸುತ್ತಾರೆ. ಗಂಡಿನಿಂದಲೂ ಜೀರಿಗೆ ಬೆಲ್ಲ ಹಾಕಿಸಿ ಮಧ್ಯೆ ಇರುವ ಬಿಳಿ

ಪರದೆಯನ್ನು ತೆಗೆಸುತ್ತಾರೆ. ನಂತರ ಹೆಣ್ಣು ತನ್ನ ಕೊರಳಿನ ಹಾರ ತೆಗೆದು ಗಂಡಿಗೂ ಗಂಡು ತನ್ನ ಕೊರಳಿನ ಹಾರ ತೆಗೆದು ಹೆಣ್ಣಿಗೂ ಹಾಕುವಂತೆ ಹೇಳುತ್ತಾರೆ. ಆಗ ಒಂದು ತಟ್ಟೆಯಲ್ಲಿ ಎಲೆ ಅಡಿಕೆ, ಅರಿಶಿನ ಕುಂಕುಮ, ತೆಂಗಿನ ಕಾಯಿ ಇಟ್ಟು ಅದರ ಮೇಲೆ ಮಾಂಗಲ್ಯವನಿಟ್ಟು ಮದುವೆಗೆ ಬಂದಿರುವ ಬಂಧು ಬಾಂಧವರು, ಗುರುಹಿರಿಯರಿಗೂ ಮುಟ್ಟಿಸುವಂತೆ ತಿಳಿಸುತ್ತಾರೆ ಅದರಂತೆ ಒಬ್ಬರು ಜೋಪಾನವಾಗಿ ಅದನ್ನು ಎಲ್ಲರಿಗೂ ಮುಟ್ಟಿಸಿ ಶರಣೆನ್ನಿಸುತ್ತಾರೆ. ಇದರಲ್ಲಿ ಎರಡು ಅರ್ಥಗಳುಂಟು. ಒಂದು ಈ ತಾಳಿಯನ್ನು ಕಟ್ಟಲು ಗುರುಹಿರಿಯರು ಸಾಕ್ಷಿಯೂಗುವುದು, ಮತ್ತೊಂದು ಮಾಂಗಲ್ಯ ಧಾರಣೆ ಮಾಡಲು ಶುಭವನ್ನು ಹಾರೈಸುವುದು. ಅದಾದ ಬಳಿಕ ತಟ್ಟೆಯಲ್ಲಿ ಅಕ್ಷತೆಯನ್ನು ತೆಗೆದುಕೊಂಡು ಎಲ್ಲರಿಗೂ ನೀಡುತ್ತಾರೆ. ಈ ಹೊತ್ತಿಗಾಗಲೆ ಪುರೋಹಿತರು ದಾಂಪತ್ಯ ಬಂಧನದ ಸೂಚಕವಾಗಿ ಹೆಣ್ಣು ಗಂಡಿನ ಸೆರಗುಗಳನ್ನು ಕಟ್ಟಿ ಮೂರು ಗಂಟು ಹಾಕಿರುತ್ತಾರೆ. ಇದನ್ನೇ "ಬ್ರಹ್ಮ ಗಂಟು" ಎನ್ನುವರು.

ಅಷ್ಟೊತ್ತಿಗೆ ಮಾಂಗಲ್ಯವನ್ನು ಶರಣೆನ್ನಿಸಿ ತಂದಿರುತ್ತಾರೆ. ಪುರೋಹಿತರು ಗಂಡಿನ ಕೈಗೆ ಮಾಂಗಲ್ಯವನ್ನು ನೀಡಿ ಅನೇಕ ಮಂತ್ರಗಳನ್ನು ಪಠಿಸುತ್ತಾ ಗಂಡಿನ ಕೈಯಲ್ಲಿರುವ ಮಾಂಗಲ್ಯವನ್ನು ಮೇಲಕ್ಕೆತ್ತಿ ಎಲ್ಲರಿಗೂ ತೋರಿಸುವಂತೆ ತಿಳಿಸಿ ಸೋದರ ಮಾವ ಅಥವಾ ಪುರೋಹಿತರೆ ನೆರೆಸಿರುವ ಬಂಧುಗಳ ಗಡೆ ತಿರುಗಿ ಗುರುಸ್ವಾಮಿಗಳು, ಕುಲಸ್ವಾಮಿಗಳು, ಹತ್ತು ದೈವದ ಕುಲದವರು ತಾಳಿ ಕಟ್ಟುವುದಕ್ಕೆ ಅಪ್ಪಣೆ ಕೊಡಬೇಕು ಎಂದು ಕೇಳುವರು. ಆಗ ಬಂಧುಗಳು "ಶುಭಮಸ್ತು" ಎಂದು ಒಪ್ಪಿಗೆ ಸೂಚಿಸುವರು. ಈ ರೀತಿ ಮೂರು ಬಾರಿ ಹೇಳಿದ ನಂತರ ಗಟ್ಟಿಮೇಳ ನುಡಿಸಲು ಸೂಚಿಸುತ್ತಾರೆ. ಪುರೋಹಿತರು ಮಾಂಗಲ್ಯಂ ತಂತುನಾನೇನ ..... ಎಂದು ಮಂತ್ರ ಹೇಳುತ್ತಾರೆ. ಗಂಡು ತನ್ನ ಕುಲದೈವವನ್ನು ನೆನೆದು ಆಕೆಯ ಕೊರಳಿಗೆ ಮಾಂಗಲ್ಯ ಧಾರಣೆ ಮಾಡಿ ಮೂರು ಗಂಟು ಹಾಕುತ್ತಾನೆ. ಅಲ್ಲಿ ನೆರೆದ ಬಂಧುಗಳು ಅಕ್ಷತೆ ಹಾಕಿ ಶುಭ ಹಾರೈಸುತ್ತಾರೆ. ಸೊಬಾನೆಯವರು ಸೊಬಾನೆ ಹಾಡುತ್ತಾರೆ.

"ಕಲ್ಯಾಣ ಸೋಬಾ ಕಲ್ಯಾಣ / ಕಲ್ಯಾಣ ಗಿರಿಜಾ ಕಲ್ಯಾಣ"
ಕಲ್ಯಾಣ ಸೀತಾ ಕಲ್ಯಾಣ / ಕಲ್ಯಾಣ ಗೌರಿ ಕಲ್ಯಾಣ //ಪ//
ಧಾರೆ ಹೊತ್ತಿಗೆ ಯಾರ‍್ಯಾರು ಬರಬೇಕು
ತಾಯಿ ತಂದೆಯವರು ಬರಬೇಕು / ಆಗಲೆ
ಧಾರೆಗೆ ಕೈಯ ಕೊಡಬೇಕು //ಕಲ್ಯಾಣ//
ತಾಳಿ ಕಟ್ಟೋವಾಗ ತಾಳೆಯಮರ ಚಿಗುರ‍್ಯಾವೆ
ತಾಯಿ ಬಣ್ಣದ ಹಕ್ಕಿ ನುಡಿದಾವೆ / ಬೀಗರಿಗೆ
ತಾಯಿ ಬಂದು ಧಾರೆ ಎರದಾರೆ //ಕಲ್ಯಾಣ//
ಹೊನ್ನು ಕಟ್ಟುವಾಗ್ಗೆ ಹೊನ್ನಿನ ಮರ ಚಿಗುರ‍್ಯಾವೆ

ಹೊನ್ನ ಬಣ್ಣದ ಹಕ್ಕಿ ನುಡಿದಾವೆ // ಬೀಗರಿಗೆ

ತಂದೆ ಬಂದು ಧಾರೆ ಎರೆದಾರೆ //ಕಲ್ಯಾಣ//

ಬೆಲ್ಲ ಜೀರಿಗೆ ಕೊಳ್ಳವ್ವ ನಿನ್ನ ಬಗಸೀಗೆ

ಒತ್ತಮ್ಮ ನೀ ಪುರುಷನ ತಲೆಮಾಲ್ಯ / ಬೀಗರಿಗೆ

ಸಂತೋಷವಾಗಿ ಮನೆ ಬೆಳಗಲಿ //ಕಲ್ಯಾಣ// [4]

ಎಂದು ಹಾಡುವಾಗ ಶೃತಿ ಹಿಡಿದು ಹಾಡಕುವವರಿಗೆ ಧನಿಗೂಡಿಸುತ್ತಾರೆ. ಎಲ್ಲಾ ದೇವತೆಗಳು ಸ್ವರ್ಗದಲ್ಲಿ ಹಾರೈಸುವರು. ಕಂಕಣ ಭಾಗ್ಯದ ಯೋಗ ಪಡೆದ ಹೆಣ್ಣು ಮುತ್ತೈದೆ ಸ್ಥಾನ ಪಡೆದು ಸಂಭ್ರಮಿಸುವಳು.

ನಂತರ ಪುರೋಹಿತರು ಗಂಡಿನ ಕೈಗೆ ಊದು ಬತ್ತಿಯನ್ನು ಕೊಟ್ಟು ಬ್ರಹ್ಮ, ವಿಷ್ಣು, ಮಹೇಶ್ವರ ಸಾಕ್ಷಿಯಾಗಿ ಅವರ ಹೆಸರಿನಲ್ಲಿ ಕಟ್ಟಿದ ಮಾಂಗಲ್ಯದ ಗಂಟಿಗೆ ಪೂಜೆ ಮಾಡಿಸಿ, ಹೂ ಮುಡಿಸಿ ಕುಂಕುಮ ವಿಡಿಸುತ್ತಾರೆ. ನಂತರ ಇಬ್ಬರನ್ನೂ ಕುರ್ಚಿಗಳ ಮೇಲೆ ಎದುರುಬದರಾಗಿ ಕೂರಿಸಿ, ಗಂಡಿನ ಕೈಗೆ ವೀಳ್ಯದೆಲೆ ಮತ್ತು ತೆಂಗಿನ ಕಾಯಿಯನ್ನು ಕೊಡುತ್ತಾರೆ. ಗಂಡು ಎರಡೂ ಕೈಗಳಲ್ಲೂ ಹಿಡಿದು ಕೈಗಳನ್ನು ಮುಂದೆ ಚಾಚುತ್ತಾನೆ. ಹಾಗೇ ಹೆಣ್ಣು ತನ್ನ ಕೈಗಳನ್ನು ಒಡ್ಡುತ್ತಾಳೆ. ಇಬ್ಬರೂ ಕೈಗಳಲ್ಲಿ ತೆಂಗಿನ ಕಾಯಿಡಿದಾಗ ಮೊದಲು ಹೆಣ್ಣಿನ ತಂದೆ ತಾಯಿಗಳು ಧಾರೆ ಕುಡಿಕೆಯಿಂದ ಹಾಲನ್ನು ತೆಗೆದುಕೊಂಡು ಮೂರು ಬಾರಿ ಎರೆದು ಕನ್ಯಾಧಾನ ಮಾಡುವರು. ಅಕ್ಷತೆ ಹಾಕಿ ಆಶೀರ್ವದಿಸುತ್ತಾರೆ. ನಂತರ ಗಂಡಿನ ತಂದೆ ತಾಯಿಗಳೂ, ಸೋದರ ಮಾವಂದಿರು, ರಕ್ತ ಸಂಬಂಧಿಗಳು, ಗುರುಹಿರಿಯರು ಹಾಲು ಎರೆದು ಅಕ್ಷತೆ ಹಾಕಿ ಹಾರೈಸುತ್ತಾರೆ. ಇದನ್ನೇ "ಧಾರೆ ಮುಹೂರ್ತ" ಎಂದು ಕರೆಯುವರು.

**ಸಪ್ತಪದಿ ತುಳಿಯುವುದುಃ**

ಧಾರೆ ಮುಹೂರ್ತವಾದ ಮೇಲೆ ಇಬ್ಬರೂ ಕಿರುಬೆರಳುಗಳನ್ನು ಹಿಡಿದು ಬ್ರಹ್ಮ ಗಂಟಿನ ಸಮೇತವಾಗಿ ಧಾರೆ ಕಂಬ ಮತ್ತು ಅಗ್ನಿ ಕುಂಡದ ಸುತ್ತಲು ಸುತ್ತುವರು. ಮುಂದೆ ಗಂಡು ಹೆಜ್ಜೆ ಇಟ್ಟ ಮೇಲೆ ಆ ಹೆಜ್ಜೆಯ ಮೇಲೆ ಹೆಣ್ಣು ಹೆಜ್ಜೆ ಇಡುವಳು. ಇದನ್ನೇ "ಸಪ್ತಪದಿ" ತುಳಿಯುವುದು ಎನ್ನುವರು. ಏಳೇಳು ಜನ್ಮದಲ್ಲೂ ಸತಿಪತಿಗಳಾಗಿ, ನಿನ್ನನ್ನೆ ಅನುಸರಿಸಿ ನಡೆಯುತ್ತೇನೆ ಎಂದು ಸಾಕ್ಷಿ ರೂಪವಾಗಿ ಈ ಕಾರ್ಯ ಮುಗಿಸುತ್ತಾರೆ. ನಂತರ ಪುರೋಹಿತರು "ಬ್ರಹ್ಮಗಂಟನ್ನು" ಬಿಚ್ಚುವರು. ನಂತರ ಚಪ್ಪರದಿಂದ ಹೊರಗೆ ಕರೆದುಕೊಂಡು ಬಂದು ಅಕಾಶದ ಕಡೆ ತೋರಿಸಿ ಊದುಬತ್ತಿ ಬೆಳಗಿಸುತ್ತಾರೆ. ನಂತರ ಇಬ್ಬರನ್ನು ಆಕಾಶದ ಕಡೆ ಬೆರಳು ತೋರಿಸಿ "ಅದೋ ಅರುಂಧತಿ ನಕ್ಷತ್ರ ನೋಡಿದಿರಾ?" ಎಂದು ಕೇಳುವರು. ಆಗ ವಧು ವರರಿಬ್ಬರ ಒಬ್ಬರ ಕೈಯನ್ನು ಒಬ್ಬರು ಹಿಡಿದು ಬೆರಳನ್ನು ತೋರಿಸುತ್ತಾ. "ನೋಡಿದೆವು" ಎನ್ನುವರು. ನಂತರ ಎಲ್ಲರೂ ಧಾರೆ ಊಟ ಮಾಡಿ ಸಂಭ್ರಮಿಸುತ್ತಾರೆ. ಹೆಣ್ಣಿನವರು ಶಕ್ತ್ಯಾನುಸಾರ ಅಡಿಗೆ ಮಾಡಿಸಿರುತ್ತಾರೆ.

ಮುಹೂರ್ತವಾದ ನಂತರ ಮದುವೆ ಮಂಟಪದಲ್ಲಿ ಎರಡು ಕುರ್ಚಿಗಳನ್ನು ಹಾಕಿ ಕೂರಿಸುತ್ತಾರೆ. ನಂತರ ಬಂಧುಗಳ ಅವರಿಗೆ ಶುಭ ಹಾರೈಸಿ, ತಮ್ಮ ಶಕ್ತ್ಯಾನುಸಾರ ಕಾಣಿಕೆಗಳನ್ನು ನೀಡಿ ಹಾರೈಸುತ್ತಾರೆ. ವಡವೆ, ವಸ್ತುಗಳು, ಬಟ್ಟೆ ಬರೆ, ಸ್ಟೀಲ್ ವಸ್ತುಗಳನ್ನು ಕಾಣಿಕೆ ನೀಡಿ ಹರಸುವರು. ಇದಕ್ಕೆ ''ಮುಯ್ಯಿ'' ಎಂದು ಕರೆಯುವರು. ಕೆಲವೊತ್ತಾದ ನಂತರ ಮನೆಗೆ ಕರೆದು ಬಾಗಿಲಲ್ಲಿ ನಿಲ್ಲಿಸಿ ಆರತಿ ಬೆಳಗಿ ಬಲಗಾಲಿಟ್ಟು ಒಳಗೆ ಬಂದವರನ್ನು ಕರೆದುಕೊಂಡು ಸಂಭ್ರಮಿಸುವರು. ನಂತರ ಹೆಣ್ಣು ಗಂಡುಗಳು ಊಟಗಳನ್ನು ಮಾಡಿ ವಿಶ್ರಾಂತಿ ತೆಗೆದುಕೊಳ್ಳವರು.



**ಹಟ್ಟೆ ಹಸೆ ಹಚ್ಚುವುದು:**

ಧಾರೆ ಮುಹೂರ್ತವಾದ ದಿನದಂದು ಸಂಜೆ ವಧುವಿನ ಮನೆಯ ಒಂದೆರಡು ಹೆಣ್ಣು ಮಕ್ಕಳು ಊರಿನ ಪ್ರತಿಯೊಂದು ಮನೆಗೂ ಹೋಗಿ ''ಹಟ್ಟೆ ಹಸೆ ಹಚ್ಚುತ್ತಾರೆ ಬನ್ನಿ'' (ಗಂಡು ಹೆಣ್ಣು ಕೂಡಿಸುತ್ತಾರೆ ಬನ್ನಿ) ಎಂದು ಎಲ್ಲರನ್ನು ಕರೆದು ಬರುತ್ತಾರೆ. ಹೀಗೆ ಪ್ರತೀ ಮನೆಯಿಂದಲೂ ಹೆಂಗಸರೂ, ಗಂಡಸರೂ ಬಂದು ಸೇರುತ್ತಾರೆ. ಹೆಣ್ಣು ಗಂಡುಗಳನ್ನು ಅಲಂಕಾರ ಮಾಡಿ ಎರಡು ಕುರ್ಚಿಯ ಮೇಲೆ ಬಿಳಿ ಬಟ್ಟೆಯನ್ನು ಹರಡಿ ಕೂರಿಸುತ್ತಾರೆ. ಅವರ ಮುಂದೆ ಬೆಂಚನ್ನು ಹಾಕಿ ಬಿಳಿ ಬಟ್ಟೆ ಹರಡಿ ಅದರ ಮೇಲೆ ಐದಾರು ತಟ್ಟೆಗಳಲ್ಲಿ ತಿಂಡಿ ತಿನಿಸು, ಬಾಳೆಹಣ್ಣು, ತೆಂಗಿನ ಕಾಯಿ, ಎಲೆ ಅಡಿಕೆ ತುಂಬಿ ತಂದು ಇಡುತ್ತಾರೆ. ಪಕ್ಕದಲ್ಲಿ ಕಳಸ ಇಡಿದಿರುವವರು ಕೂರುತ್ತಾರೆ. ಸೋಬಾನೆಯವರು ಸೊಬಾನೆ ಪದಗಳನ್ನು ಹಾಡುತ್ತಾರೆ. ವಾದ್ಯದವರು ವಾದ್ಯ ನುಡಿಸುತ್ತಾರೆ. ಅಲ್ಲಿ ನೆರೆದಿರುವ ಮುತ್ತೈದೆಯರೆಲ್ಲಾ ಒಬ್ಬರಾದ ಮೇಲೊಬ್ಬರು ಕಳಸಕ್ಕೆ ಹೆಣ್ಣು ಗಂಡುಗಳಿಗೆ ಹಸೆ (ಸೇಸೆ) ಹಚ್ಚುತ್ತಾರೆ. ಅವರ ಮುಂದಿರುವ ಒಂದೆರಡು ತಟ್ಟೆಗಳನ್ನೆತ್ತಿ ಹೆಣ್ಣುಗಂಡಿಗೆ ಮುಟ್ಟಿಸಿ ಶರಣೆನ್ನಿಸುತ್ತಾರೆ. ನಂತರ ತಾವು ಕೊಡಬೇಕಾದ ಕಾಣಿಕೆ/ ಮುಯ್ಯನ್ನು ಕೊಟ್ಟು ಹರಸುತ್ತಾರೆ.

**ಶಿವಾಸನ ಹಾಕುವುದು:**

ಕುಂಚಿಟಿಗ ಜನಾಂಗದ 48 ಬೆಡಗುಗಳಲ್ಲಿ ಒಂದು ಬೆಡಗಿನವರಿಗೆ ಈ ಶಿವಾಸನ ಹಾಕುವ ಅಧಿಕಾರ ವಿರುತ್ತದೆ. ಅವರೆಂದರೆ "ಕೊಗ್ಗೇನವರು" ಎಂಬ ಬೆಡಗಿನವರು ಆ ಊರಿನಲ್ಲಿ ಈ ಬೆಡಗಿನವರು ಇಲ್ಲದಿದ್ದರೆ ಅವರ ಸೋದರ / ದಾಯಾದಿಗಳು ಈ ಕೆಲಸ ನಿರ್ವಹಿಸುತ್ತಾರೆ. (ಕೊಗ್ಗೇನವರು ಯಾರಾದರು ಇದ್ದರೆ ಬಂದು ಗದ್ದುಗೆ ಹಾಸಬಹುದು ಎಂದು ದಾಯಾದಿ ಸಂಬಂಧಿ ಕರೆಯುತ್ತಾನೆ). ಹೀಗೆ ಈ ಬೆಡಗಿಗೆ ಸೇರಿದ ಒಬ್ಬ ವ್ಯಕ್ತಿ ತನ್ನ ಮನೆಯಿಂದ ಒಂದು ಕರಿಕಂಬಳಿಯನ್ನು ತಂದು ಕೈಕಾಲು ಮುಖ ತೊಳೆದುಕೊಂಡು ಗಂಡುಹೆಣ್ಣು ಮುಂದೆ ಹಾಸುತ್ತಾನೆ. ಅದಕ್ಕೆ ಹಸುವಿನ ಗಂಜಲ ಚಿಮುಕಿಸಿ, ಸ್ವಲ ಹಾಲನ್ನು ತೆಗೆದುಕೊಂಡು ಒಂದು ಮಾವಿನ ಪತ್ರೆಯಿಂದ ಅದರ ಮೇಲೆ ಚಿಮುಕಿಸಿ ಶುದ್ದಿಗೊಳಿಸುತ್ತಾರೆ. ನಂತರ ವಿಭೂತಿಯಿಂದ ಕಂಬಳಿಯ ಮೇಲೆ ಚೌಕಕಾರವಾಗಿ ಗೆರೆ ಎಳೆದು ತಾನೂ ಹಣೆಗೆ ವಿಭೂತಿ ಹಚ್ಚಿಕೊಂಡು ನಾಲ್ಕು ಮೂಲೆಗೂ ಅರಿಶಿಣ ಕುಂಕುಮ, ಹೂ ಇಡುತ್ತಾನೆ. ಇದಾದ ನಂತರ ಒಂದು ವಿಳ್ಳೆರಾಯನ್ನು ಮಾಡಿಸಿ ಕಂಬಳಿಯ ಒಂದು ಮೂಲೆಯಲ್ಲಿ ಸ್ವಲ್ಪ ಅಕ್ಕಿ, ಬೆಲ್ಲ ಇಟ್ಟು ಅದರ ಮೇಲೆ ವಿಳ್ಳೇರಾಯನನ್ನು ಇಡುತ್ತಾನೆ.

ಕುಂಬಾರರ ಮನೆಯಿಂದ ಪೂಜೆ ಮಾಡಿಸಿ ತಂದಿರುವ ಒಂದು ಸಣ್ಣ ಕುಡಿಕೆಗೆ ಹಂಗದಾರ ಕಟ್ಟಿ ಕಂಬಳಿಯ ಮಧ್ಯೆ ಇಟ್ಟು ಹೇರನ್ನು ತರಲು ಹೇಳುತ್ತಾನೆ. ಈತನಿಗೆ ಸಹಾಯಕರಾಗಿ ಒಂದಿಬ್ಬರು ಹಿರಿಯರು ಪಕ್ಕದಲ್ಲಿರುತ್ತಾರೆ.

ಇತ್ತ ಇಬ್ಬರು ಗಂಡಸರು / ಹುಡುಗರು ವಲ್ಲಿ ವಸ್ತ್ರದಲ್ಲಿ ಎಲೆ, ಅಡಿಕೆಗಳನ್ನು ಕಟ್ಟಿಕೊಂಡು ಕತ್ತೆಯಂತೆ ಹೇರನ್ನು ಹೊರುತ್ತಾರೆ. ಇವರಿಗೆ ವರಸೆ ಅಗುವ ಸಂಬಂಧಿಯೊಬ್ಬ ವಲ್ಲಿಯಲ್ಲಿ ಕತ್ತೆಗಳಿಗೆ ಹೊಡೆಯುವನು. ಆಗ ಆ ಗಂಡಸರು ಆತನನ್ನು ಕತ್ತೆಗಳಂತೆ ಒದೆಯುತ್ತಾ ಹೇರನುನ ತಂದು ಕರಿಕಂಬಳಿಯ ಗದ್ದುಗೆ ಮೇಲೆ ಸುರಿಯುವರು. ಗದ್ದುಗೆ ಹಾಸಿರುವ ವ್ಯಕ್ತಿ ಎಲೆಯನ್ನು ಕಟ್ಟೆ ಮಾಡಿ ಮಧ್ಯ ಅಡಿಕೆಯನ್ನು ಗುಡ್ಡೆ ಹಾಕುವನು. ಅಲ್ಲಿ ಕುಳಿತಿರುವವರು "ರಾಶಿ" ಏಳಲಿಲ್ಲ ಎಂದು ಆಕ್ಷೇಷಿಸಿವರು ಅಗ ಹೆಣ್ಣಿನ ಮನೆಯವರು ತಾವು ಬಡವರಾದ್ದರಿಂದ ತಮ್ಮ ಶಕ್ತಿ ಮೀರಿ ನೀಡಿದ್ದೇವೆ ತಾವು ಇರುವುದರಲ್ಲಿಯೆ ಕರ್ಾ ನಡೆಸಬೇಕೆಂದು "ಮಾಪ್" ಮಾಡಿಕೊಳ್ಳುವಂತೆ ಹೇಳುತ್ತಾರೆ. ಹೀಗೆ ಮೂರು ಬಾರಿ ಕತ್ತೆಗಳು ಹೇರನ್ನು ತಂದು ಸುರಿದ ಮೇಲೆ, ಗದ್ದಗೆಯ ವಾರಸುದಾರನು ಎದ್ದುನಿಂತು "ರಾಶಿ ಪೂಜೆ ಮಾಡಲು ಹತ್ತು ಕುಲದ ಸ್ವಾಮಿಗಳು ಅಪ್ಪಣೆ ಕೊಡಬೇಕೆಂದು ಮೂರು ಬಾರಿ ಕೇಳುವನು. ಆಗ ನೆರೆದ ಕುಲದವರೆಲ್ಲ "ಅಪ್ಪಣೆ" ಎಂದು (ಶುಭಮಸ್ತು) ಮೂರು ಬಾರಿ ಹೇಳಿದ ಮೇಲೆ ರಾಶಿ ಪೂಜೆ ಮಾಡುತ್ತಾರೆ. ಗಂಡಿನ ಮನೆಯವರಿಂದ 12 ರೂಗಳನ್ನು "ತೆರದ" ರೂಪದಲ್ಲಿ ಪಡೆದು ಎರಡು ತಟ್ಟೆಗಳಲ್ಲಿ ಎಲೆ ಅಡಿಕೆ, ಹಣ್ಣು, ಅಕ್ಕಿ ಉಂಡೆ ಇಟ್ಟು ಇಬ್ಬರ ಕಡೆಯ ಒಬ್ಬೊಬ್ಬ ಗಂಡಸರು ತಲೆಗೆ ಪೇಟಸುತ್ತಿ ಅವರಿಗೆ ಇವರು, ಇವರಿಗೆ ಅವರು ವಿಭೂತಿ ಕುಂಕುಮ ವಿಟ್ಟು ಹಾರ ಹಾಕುತ್ತಾರೆ. ನಂತರ ತಟ್ಟೆಗಳು ಒಂದಕ್ಕೊಂದು ತಾಗದಂತೆ ಮೇಲೆ ಕೆಳಗೆ ಹಿಡಿದು" ನಮ್ಮ ಮಗಳಾದ ಇಂತವಳನ್ನು, ಇಂತವರ ಮಗನಿಗೆ ಸಂತೋಷದಿಂದ ಒಪ್ಪಿ ಕೊಟ್ಟಿದ್ದೇವೆ ಎಂದಾಗ ಗಂಡಿನ ಕಡೆಯವನು, ಇಂತವರ ಮಗಳನ್ನು ತಮ್ಮ ಮಗನಿಗೆ ಸಂತೋಷದಿಂದ ಒಪ್ಪಿ ತಂದುಕೊಂಡಿದ್ದೇವೆ ಎಂದು ಇಬ್ಬರು ಮಾರುಬಾರಿ ಹೇಳುತ್ತಾರೆ. ನಂತರ ಎರಡು ವಸ್ತ್ರಗಳಿಂದ ಸಿಂಬೆ ಸುತ್ತಿ ಅವುಗಳನ್ನು ದೇವರ ಮನೆಯಲ್ಲಿ ಒಂದಕ್ಕೊಂದು ತಾಗದಂತೆ ಇಡುತ್ತಾರೆ.

ಇತ್ತ ರಾಶಿ ಪೂಜೆ ಮುಗಿದ ನಂತರ "ವೀಳ್ಯ" ವನ್ನು ಹಂಚುವರು. ಮೊದಲು ದೇವತೆಗಳ ಹೆಸರಿನಲ್ಲಿ ವಿಳ್ಯ ಹಂಚುವರು. ಉದಾಃ ಆಕಾಶರಾಯನ ವೀಳ್ಯ, "ಭೂಮಿ ತಾಯಿ ವೀಳ್ಯ" ಎಂದು ಕರೆಯುವರು. ಆಗ ಅದನ್ನು ರೈತರಾದವರು ಪಡೆಯುವರು. ವೀಳ್ಯವನ್ನು ಸಂಬಂಧ ಪಟ್ಟ ಬೆಡಗು, ಕುಲ, ಕಸುಬಿನವರು ಮಾತ್ರ ಪಡೆಯಬೇಕು. ಗ್ರಾಮದೇವರಿಗೆ, ಯಜಮಾನರಿಗೆ, ಗೌಡ ಶಾನುಭೊಗರಿಗೆ, ಎಡಗೈ ಬಲಗೈಯವರಿಗೆ. ವಾದ್ಯದವರಿಗೆ, ಸೋಭಾನೆಯವರಿಗೆ, ಚಪ್ಪರ ಹಾಕಿದವರಿಗೆ. ಅಡುಗೆ ಮಾಡಿದವರಿಗೆ, ಕಳಸದ ವರಿಗೆ, ಹೆಣ್ಣಿನವರಿಗೆ, ಗಂಡಿನವರಿಗೆ ವೀಳ್ಯಗಳನ್ನು ಕೊಡುವರು. ಹಾಗೆ ತಮ್ಮ ಜನಾಂಗದ 48 ಬೆಡಗಿನವರಿಗೆ, ಊರಿನ ನಾಲ್ಕು ದಿಕ್ಕಿನ ಗಡಿವೀಳ್ಯಗಳನ್ನು

ಹಂಚುತ್ತಾರೆ. ನಂತರ ಊರಿನ ಪ್ರತಿ ಮನೆಗೂ ವೀಳ್ಯ ಹಂಚುವರು. ಹಾಗೂ ವಿವಾಹದ ಸಂದರ್ಭದಲ್ಲಿ ಕೊಡಲೇಬೇಕಾದ ವೀಳ್ಯಗಳನ್ನು ನೀಡವರು.

**ವಿವಾಹದಲ್ಲಿ ಶರಣರಿಗೆ ಕೊಡುವ ವೀಳ್ಯ (ಇವರೆಲ್ಲ ಕುಂಚಿಟಿಗರ ಮೂಲ ಪುರುಷರು)**

1. ಉಂಡೆ ಎತ್ರಾಯನಿಗೆ - 1 ವೀಳ್ಯ (ಉಂಡೇನವರಿಗೆ ಕೊಡಬೇಕು)
2. ಜಲಧಿ ಬೊಪ್ಪರಾಯನ ವೀಳ್ಯ (ಜಲದೇನವರಿಗೆ ಕೊಡಬೇಕು)
3. ಹಾವಿನ ಕಾಮರಾಯನ ವೀಳ್ಯ (ಹಾವಿನವರಿಗೆ ಕೊಡಬೇಕು)
4. ಧಾನ್ಯದ ಧನಿಕ ರಾಯನ ವೀಳ್ಯ (ಧಾನ್ಯದವರಿಗೆ ಕೊಡಬೇಕು)
5. ಹುಳಿಯಾ ಮಾರಗೊಂಡನಿಗೆ (ಹುಳಿಯಾರರಿಗೆ ಕೊಡಬೇಕು)
6. ವೀರಕ್ಯಾತರಾಯನ ವೀಳ್ಯ (ಬಸಲೇನವರಿಗೆ ಕೊಡಬೇಕು)
7. ಮಲಗೊಂಡ ಶಿಂಗ್ರಿಗೆ ಕೊಡುವ ವೀಳ್ಯ (ಎರಡು ಕೆರೆಯವರಿಗೆ ಕೊಡಬೇಕು) [5]

**ವೀಳ್ಯದ ತಪಸೀಲು**

1. ಅಷ್ಟ ಕಟ್ಟೆ ವೀಳ್ಯ -1
2. ನಾಡು ನಾಲಿಗೆ ವೀಳ್ಯ -1
3. ಮೊಂಡು ಗುದ್ದಲಿ ವೀಳ್ಯ -1
4. ವೀರನಾಗಮ್ಮನ ವೀಳ್ಯ -1
5. ಶಿರವಾಳ ಸಿದ್ದಪ್ಪನ ವೀಳ್ಯ -1

} ಈ ಐದು ವೀಳ್ಯಗಳನ್ನು ಬಸಲೇನವರಿಗೆ ಕೊಡಬೇಕು

6. ಕಾಡಿನ ಚಿಕ್ಕಣ್ಣನ ವೀಳ್ಯ -1 ಹಾವಿನವರಿಗೆ ಕೊಡಬೇಕು
7. ವೀರ ಬೊಮ್ಮಣ್ಣನ ವೀಳ್ಯ -1
8. ಜುಂಜಪ್ಪನ ವೀಳ್ಯ -1

} ಈ ಎರಡು ವೀಳ್ಯಗಳನ್ನು ಅಳುವನವರಿಗೆ ಕೊಡಬೇಕು

ಹೀಗೆ ವೀಳ್ಯಗಳನ್ನು ಕೊಟ್ಟ ನಂತರ ಗದ್ದುಗೆಯಲ್ಲಿ ಉಳಿದ ರಾಶಿಯನ್ನು ಎರಡು ಭಾಗ ಮಾಡಿ, ಒಂದು ಭಾಗವನ್ನು ಅಲ್ಲಿ ನೆರೆದಿರುವ ಜನರಿಗೂ ಮತ್ತೊಂದು ಭಾಗವನ್ನು ಗದ್ದುಗೆ ಹಾಸಿದ ವ್ಯಕ್ತಿಯು ಅವನ ಸಹಾಯಕರು ಹಂಚಿಕೊಳ್ಳುವರು. ಹೆಣ್ಣು ಮಕ್ಕಳಿಗೆ ಅರಿಶಿಣ ಕುಂಕುಮ ನೀಡಿ ಮೇರವಣಿಗೆಗೆ ಸಿದ್ದರಾಗುವರು. ಆಗ ಹೆಣ್ಣು ಎದ್ದು ನಿಂತು ಗಂಡನಿಗೆ

ಅರಿಶಿಣ ಕುಂಕುಮ ಹಚ್ಚಿ, ಕಳಶಕ್ಕೆ ಸೇಳೆ ಇಟ್ಟು, ನಂತರ ಕಲಶದಲ್ಲಿ ಅಕ್ಕಿಯನ್ನು ತೆಗೆದುಕೊಂಡು ಗಂಡನಿಗೆ ಸೇಸೆ ಇಟುಟ ಕಾಲಿಗೆ ನಮಸ್ಕರಿಸುವಳು. ಅನಂತರ ಒಂದು ತಟ್ಟೆಯಲ್ಲಿ ಎಲೆ ಅಡಿಕೆ, ಬಾಳೆಹಣ್ಣು ಇಟ್ಟುಕೊಂಡು ಗಂಡಿಗೆ ಈ ರೀತಿ ಹೇಳಲು ಹೇಳಿಕೊಡುತ್ತಾರೆ.

"ಹೊನ್ನರಸ, ಚೆನ್ನರಸ ಪಟ್ಟದರಸ ಪ್ರಾಣಕಾಂತ
ಮುದ್ದು ಮೋಹನ ಗುಣ ಅಷ್ಟೈಶ್ವರ್ಯ ಸಂಪನ್ನ
ಅತ್ತೆಯ ಮಗನೆ ಮುತ್ತಿನ ಚೆಂಡೆ
ಮಾವನ ಮಗನೆ ಮಲ್ಲಿಗೆ ಅರಳೆ
ಕೋಡಿ ರಂಗನಾಥ ಸ್ವಾಮಿ ಆಗ್ರದಿಂದ
ಅಣ್ಣಯ್ಯನವರು ಹಣ್ಣು ಫಲಾರ ಕಳುಹವ್ರೆ
ಮಡ್ಲು ಒಡ್ರಿ ಮಡ್ಲು ತುಂಬೇನು" ...... ಎಂದು ಹಿರಿಯರು ಹೇಳಿಕೊಟ್ಟಂತೆ ಹೇಳುವಳು.

ಆಗ ಗಂಡು ತನ್ನ ವಸ್ತ್ರವನ್ನು ಒಡ್ಡವನು, ತಟ್ಟೆಯಲ್ಲಿರುವುದನ್ನು ವಸ್ತ್ರದಲ್ಲಿ ಹಾಕುವಳು. ಅಷ್ಟರಲ್ಲಾಗಲೇ ಗಂಡು ತನ್ನ ಕುರ್ಚಿಯನ್ನು ಬಿಟ್ಟು ಹೆಣ್ಣಿನ ಕುರ್ಚಿಯಲ್ಲಿ ಕುಳಿತಿರುತ್ತಾನೆ. ಆಗ ಹೆಣ್ಣು ತನ್ನ ಆಸನವನ್ನು ಬಿಟ್ಟುಕೊಡುವಂತೆ ಈ ರೀತಿ ಕೇಳುವಳು.

"ಚದುರಕ್ಕೆ ಚದುರ, ರನ್ನದ ಚದುರ
ಚಿನ್ನದ ಚದುರ, ಹತ್ತೊದ್ಯೆ ಧೈವದವರು ಒಪ್ಪುವಂತ ಚದುರ, ನಾನೂ ನೀನು ಕೂಡುವಂತ ಚದುರ
ನನ್ನ ಚದುರ ಬಿಟ್ಟು ನಿಮ್ಮ ಚದುರಕ್ಕೋಗಿ" ..... ಎಂದು ಬೇಡುವಳು.

ಆಗ ಗಂಡು ತನ್ನ ಜಾಗದಲ್ಲಿ ಬಂದು ಕೂರುವನು. ಹೆಣ್ಣು ತನ್ನ ಜಾಗದಲ್ಲಿ ಕೂರುವಳು. ಇದೇ ರೀತಿ ಗಂಡು ಸಹ ಎದ್ದು, ಆಕೆಗೆ ಅರಿಶಿಣ ಕುಂಕುಮ ಹಚ್ಚಿ, ಹೂಮುಡಿಸಿ ಸೇಸೆ ಇಡುವನು. ನಂತರ ತಟ್ಟೆಯಲ್ಲಿ ಎಲೆ ಅಡಿಕೆ, ತೆಂಗಿನ ಕಾಯಿಯನ್ನು ಇಟ್ಟುಕೊಂಡು ತನ್ನ ಹೆಂಡತಿಗೆ ಈ ರೀತಿ ಹೇಳುವನು –

"ಹೊನ್ನರಸಿ, ಚೆನ್ನರಸಿ, ಪಟ್ಟದರಸಿ, ಪ್ರಾಣ ಕಾಂತೆ,
ಮುದ್ದು ಮೋಹನೆ ಗುಣ ಅಷ್ಟೈಶ್ವರ್ಯ ಸಂಪನ್ನೆ, ಅತ್ತೆಯ ಮಗಳೆ,

ಮುತ್ತಿನ ಚೆಂಡೆ, ಮಾವನ ಮಗಳೆ ಮಲ್ಲಿಗೆ ಹರಳೆ

ಜೀರಿಗೆ ಹಳ್ಳಿ ಆಗ್ರದಿಂದ ಕಾಯಿ ಫಲಹಾರ ತಂದಿದ್ದೀನಿ ಮಡ್ಲೊಡು ಮಡ್ಲು ತುಂಬೇನು " -

ಎಂದು ಹೇಳುತ್ತಾ ತಟ್ಟೆಯಲ್ಲಿರುವ ಫಲ ತಾಂಬೂಲವನ್ನು ಆಕೆಯ ಮಡಿಲಿಗೆ ಸುರಿಯುವನು. ಅಷ್ಟರಲ್ಲಾಗಲೆ ಹೆಣ್ಣು ತನ್ನ ಜಾಗವನ್ನು ಬಿಟ್ಟು ತನ್ನ ಗಂಡನ ಕುರ್ಚಿಯಲ್ಲಿ ಕೂತಿರುವಳು. ಆಗ ಗಂಡನು ತನ್ನ ಜಾಗವನ್ನು ಬಿಟ್ಟುಕೊಡುವಂತೆ ಹಿಂದಿನಂತೆ ಕೇಳುವನು. "ಚದುರಕ್ಕೆ ಚದುರ, ರನ್ನದ ಚದುರ, ಚಿನ್ನದ ಚದುರ ಹತ್ತೂ ದೈವದವರು ಒಪ್ಪುವಂತೆ ಚದುರ, ನಾನೂ ನೀನು ಕೂಡೋ ಚದುರ ನನ್ನ ಚದುರ ಬಿಟ್ಟು ನಿನ್ನ ಚದುರಕ್ಕೆ ಹೋಗು ಎಂದಾಗ, ಆಕೆ ತನ್ನ ಜಾಗಕ್ಕೆ ಬಂದು ಕೂರುತ್ತಾಳೆ".

ಹೀಗೆ ಶಿವಾಸನ ಮತ್ತು ಹಸೆ ಹಚ್ಚುವ ಕಾರ್ಯವನ್ನು ಇತ್ತೀಚಿನ ದಿನಗಳಲ್ಲಿ "ಅರತಕ್ಷತೆ" ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಇದಾದನಂತರ ಮೆರವಣಿಗೆ ಹೊರಡುವರು.

**ಮೆರವಣಿಗೆ :**

ಅಲಂಕೃತರಾದ ಗಂಡು ಹೆಣ್ಣುಗಳನ್ನು ವಾದ್ಯಗಳ ಸಮೇತ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಪಡ್ಡೆ ಹುಡುಗರು ಕುಣಿತ, ಕೋಲೆ ಬಸವನಂತ ಮನರಂಜನಾ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಅಲ್ಲಲ್ಲಿ ಈಡುಕಾಯಿಗಳನ್ನು ಒಡೆಯುತ್ತಾರೆ. ತೋಟಿ ತಳವಾರರು ತಲೆಯ ಮೇಲೆ ಬೆಳಕಿನ ಪೆಟ್ರೋಮ್ಯಾಕ್ಸ್‌ಗನ್ನು ಒತ್ತತ್ತು ಮೆರವಣಿಗೆಯಲ್ಲಿ ಸಾಗುವರು. ಮಧ್ಯೆ ಮಧ್ಯೆ ಊರಿನ ಹಿರಿಯರು ಗಂಡು, ಹೆಣ್ಣಿನ ಹೆಸರು ಕೇಳುವುದು. ಕಳಸಿ ಹಿಡಿದವರನ್ನು ತಮ್ಮ ಗಂಡನ ಹೆಸರೇಳುವಂತೆ ಕೇಳುವರು. ಹೀಗೆ ಊರ ಮುಂದಿನ ದೇವಸ್ಥಾನಕ್ಕೆ ತೆರಳಿ ಪೂಜೆ ಸಲ್ಲಿಸಿ ಹಿಂದಿರುಗುವರು. ಊರಿನ ಜನರೆಲ್ಲ ಗಂಡು ಹೆಣ್ಣನ್ನು ನೋಡಲು ಮೆರವಣಿಗೆಯಲ್ಲಿ ಭಾಗವಹಿಸುವರು. ನಂತರ ಮನೆಯ ಹತ್ತಿರ ಬರುತ್ತಿದ್ದಂತೆ ತೋಟಿ, ತಳವಾರರು, ವಾದ್ಯದವರು, ಅಗಸರು ಹೆಣ್ಣು ಗಂಡನ್ನು ತಡೆದು ಹೆಸರು ಕೇಳಿ ಅವರಿಂದ ಹೊಸವಸ್ತ್ರಗಳನ್ನು ಕಾಣಿಕೆಯಾಗಿ ಸ್ವೀಕರಿಸುವರು.

**ಬಾಗಿಲು ತಡೆಯುವ ಶಾಸ್ತ್ರ:**

ಮೆರವಣಿಗೆಯಿಂದ ಬಂದ ಹೆಣ್ಣು ಗಂಡನ್ನು ಬಾಗಿಲಲ್ಲಿ ತಡೆದು ಹೆಣ್ಣಿನ ಸಹೋದರ ಮತ್ತು ಗಂಡಿನ ಸೋದರಿಯರು ತಮ್ಮ ತವರನ್ನು ನಡೆಸಿಕೊಡಿರೆಂದು ಅವರಿಂದ ವಾಗ್ದಾನ ಪಡೆಯುವರು. ಹಾಗೆ ಕಳಸ ಅಥವಾ ದಿಬ್ಬಣ ಹೊತ್ತ ತಂಗಿಯು ತನ್ನ ಅಣ್ಣ ಅತ್ತಿಗೆಗೆ ಆರತಿ ಬೆಳಗಿ ಬಾಗಿಲು ತಡೆಯುತ್ತಾಳೆ. ಅಣ್ಣನು ಆರತಿ ತಟ್ಟೆಗೆ ಹಣವನ್ನು

ಹಾಕುವನು. ಮತ್ತೆ ತಂಗಿಯು ತನ್ನ ಅಣ್ಣನ ಕಾಲುಗಳನ್ನು ಹಿಡಿದು ತಡೆದಾಗ ಅಣ್ಣನು ಏಕಮ್ಮ ತಂಗಿ ಬಾಗಿಲು ತಡೆಯುತ್ತೀಯ ಎಂದು ಕೇಳುವನು. ಆಗ ತಂಗಿಯು -

"ನಿನಗೆ ಹೆಣ್ಣು ಮಗುವಾದರೆ ನನ್ನ ಮಗನಿಗೆ ಕೊಡ ಬೇಕೆಂದು ಕೇಳುವಳು

ಅದಕ್ಕೆ ಅಣ್ಣನು ಆಗಲಮ್ಮಾ ಕೊಡುತ್ತೇನೆ" ಎನ್ನುವನು.

"ಆಗ ತಂಗಿಯು ನೀನೇನೋ ಕೊಡುವೆನೆಂದು ಹೇಳಿದೆ, ನಿನ್ನ ಹೆಂಡತಿ ಒಪ್ಪುವಳೊ ಇಲ್ಲವೋ" ಕೇಳಿ ಹೇಳು ಎನ್ನುವಳು.

"ಏನೇ ನಮಗೆ ಹೆಣ್ಣು ಮಗುವಾದರೆ ತನ್ನ ಮಗನಿಗೆ ಕೊಡಬೇಕೆಂದು ನನ್ನ ತಂಗಿ ಕೇಳುತ್ತಿದ್ದಾಳೆ, ಕೊಡೋಣವೇ?" ಎಂದು ಕೇಳಿದಾಗ ಇಬ್ಬರೂ ಒಮ್ಮತದಿಂದ ಹಾಗೇ ಹಾಗಲಿ ಕೊಡುತ್ತೇವೆ ಎನ್ನುವರು.

"ಆಗ ಅಣ್ಣನು ಹೆಣ್ಣು ಹೆತ್ತರೆ ನಿನ್ನ ಮಗನಿಗೆ ಕೊಡುತ್ತೇವೆ, ನಿಮಗೆ ಹೆಣ್ಣು ಮಗುವಾದರೆ ನಮ್ಮ ಮಗನಿಗೆ ಕೊಡುವೆಯಾ ಎಂದು ಕೇಳುವನು. ಅದಕ್ಕೆ ತಂಗಿಯ ಅಗಲಿ ಎನ್ನುವಳು. ಆಗ ಅಣ್ಣನು ನೀನೆನೋ ಆಗಲಿ ಎಂದೆ ನಿನ್ನ ಗಂಡನು ಒಪ್ಪುವನೋ ಇಲ್ಲವೊ!" ಕೇಳಿ ಹೇಳಮ್ಮ ಎಂದಾಗ, ತಂಗಿಯು ತನ್ನ ಗಂಡನನ್ನು ಏನ್ರೀ ನಮ್ಮ ಅಣ್ಣನು ತಮ್ಮ ಮಗನಿಗೆ ಹೆಣ್ಣು ಕೇಳುತ್ತಾನೆ. ಕೊಡೋಣವೇ ಎಂದಾಗ ಒಮ್ಮತದಿಂದ "ನಮ್ಮ ಮಗಳನ್ನು ನಿಮ್ಮ ಮಗನಿಗೆ ಕೊಡಲು ಒಪ್ಪಿದ್ದೇವೆ" ಎಂದು ಹೇಳುವರು. ಆಗ ಸೋಬಾನೆಯವರು ಪದ ಹಾಡುವರು.

•

"ಸೊ ಬನ್ನಿರೇ ಸೊಬಾನೆ ಬನ್ನಿರೆ //ಪ//
ಹೆಣ್ಣು ಕೇಳಾಕ ಯಾರ‍್ಯಾರು ಬರಬೇಕು
ಅಂದ ಚಂದದ ಮಾನ್ಯದವರು, ಮಾನ್ಯದವರು
ಬೆಲ್ಲದ ಹಚ್ಚಿನಾಗ ಅರಿಗೊಡೆ ನೆಟ್ಟಾರೆ
ಕರಿಯಿ ಕಬ್ಬಿನಾಗೆ ಇಂಡುಗವ ಬಿಗಿದಾರೆ
ಸಣ್ಣ ಮಲ್ಲಿಗೆಯ ಮೇಲೊದಿಕೆ ಹೊದಿಸ್ಯಾರೆ
ಸುಣ್ಣ, ಕೆಮ್ಮಣ್ಣಾಗ ಅಂಗಳವ ಬಳದಾರೆ
ಅಂದದ ಸಗಣ್ಯಾಗ, ಅಳತೆಯಗೊಂಡಾರೆ
ಹೆಣ್ಣು ಕೇಳಾಕ ಯಾರ‍್ಯಾರು ಬರಬೇಕು
ಅವರ ಅಕ್ಕ ತಂಗೀರು ಬರಬೇಕು
ಆಗಲೆ ಅಣ್ಣನ ಹೆಣ್ಣ ಪಡಿಬೇಕು

ಅತ್ತಿ ಮರದಡೆ ಅಣ್ಣನು ಕೂತುಕೊಂಡು

ತಂಗಿಗೆ ಹೆಣ್ಣ ಕೊಡಬೇಕು

ಕೊಟ್ಟಾರೆ ಕೊಡಣ್ಣ ಒತ್ತಿ ಬೇಡುವವಳಲ್ಲ

ಸಿಟ್ಟು ಬಂದಾರೆ ಸಿಕ್ಕಣ್ಣನ ಮಗಳ

ತಂದು ಲಗ್ನವ ಮಾಡಿ ......" ಎಂದು ಹಾಡುವರು [6]

ಆನಂತರ ಬಾಗಿಲ ಒಳಭಾಗದ ಸ್ವಲ್ಪ ದೂರದಲ್ಲಿ ಒಂದು ಪುಟ್ಟಿಯನ್ನು ಇಟ್ಟು. ಅದಕ್ಕೆ ಒಂದು ಕಂಚಿನ ಗಂಗಾಳವನ್ನು ಒರಗಿಸಿರುತ್ತಾರೆ. ಕಳಸದವರು ಗಂಡು ಹೆಣ್ಣು ಇಬ್ಬರಿಗೂ ವೀಳೆ ದೆಲೆ ಕೊಟ್ಟು ಅದಲರ್ಲಿ ಕಾಲುಂಗುರ, ಅಕ್ಕಿ ಕಾಳುಗಳನ್ನು ಇಟ್ಟು ಗಂಗಳಕ್ಕೆ ಎಸೆಯುವಂತೆ ಹೇಳುವರು. ಆಗ ಒಬ್ಬರಾದ ಮೇಲೊಬ್ಬರು ಎಸೆಯುತ್ತಾ "ನಮಪ್ಪ ನಮ್ಮಮನ ಮನೆ ಹಾಲೆಕ್ಕಿದಂತೆ ಉಕ್ಕಲಿ" ಎಂದು ಹೆಣ್ಣು, "ನಮ್ಮತ್ತೆ ನಮ್ಮವನ ಮನೆ ಹಾಲುಕ್ಕಿದಂತೆ ಉಕ್ಕಲಿ" ಎಂದು ಗಂಡು ಮೂರು ಬಾರಿ ಎಸೆದು ಹೇಳುವರು. ನಂತರ ಬಲಗಾಲಿಟ್ಟು ಒಳಗೆ ಬಂದಮೇಲೆ ಇಬ್ಬರಿಗೂ ಜೀರಿಗೆ ಅಥವಾ ಮೆಣಸು ನೀಡಿ ಅಡುಗೆ ಮನೆವರೆಗೆ ಅವುಗಳನ್ನು ಸರಿದು ಬಿಡುವಂತೆ ಹೇಳುವರು. ಇಬ್ಬರು ಕೈಯಲ್ಲಿರುವ ಕಾಳುಗಳನ್ನು ಸರಿದು ಬಿಡುತ್ತಾ ಬಂದು ಅಡಿಗೆ ಮನೆ ಸೇರುವರು. ಆಗ ಯಾರ ಕೈಯಿಲ್ಲ ಹೆಚ್ಚಿಗೆ ಇರುವುದೊ ನೋಡಿ ಅವರು ಮುಂದೆ ಹೆಚ್ಚ ಉಳಿತಾಯ ಮಾಡುವರೆಂಬ ನಂಬಿಕೆಯಿದೆ. ಇದಾದ ನಂತರ ಒಂದು ತಟ್ಟೆಯಲ್ಲಿ ಹಾಲನ್ನು ಸುರಿದು ಹೆಣ್ಣು ಗಂಡುಗಳಿಬ್ಬರೂ ತಮ್ಮ ಬಲಗೈನ್ನು ಹಾಲಲ್ಲಿ ಅದ್ದಿ ಒಲೆಯ ಪಕ್ಕದ ಗೊಡೆಗೆ ಅಂಗೈನ್ನು ಮೂರು ಬಾರಿ ಬಿತ್ತುವರು. ಆಗಲೂ ನಮ್ಮತ್ತೆ ಮಾವ / ನಮ್ಮಪ್ಪ ಅಮ್ಮನ ಮನೆ ಹಾಲುಕ್ಕಿದ್ದಂತೆ ಉಕ್ಕಲಿ ಎಂದು ಇಬ್ಬರು ಹೇಳುವರು.

**ಕೈತುಡುಕುವ ಶಾಸ್ತ್ರ:**

ಬಲಗಾಲಿಟ್ಟು ಮನೆಗೆ ಪ್ರವೇಶ ಮಾಡಿದ ಇಬ್ಬರನ್ನೂ ಕರೆದು ಕುಂಬಾರರ ಮನೆಯಿಂದ ತಂದ ಮಡಿಕೆಯಲ್ಲಾಗಲೀ / ಬಿಂದಿಗೆಯಲ್ಲಾಗಲಿ ಉಂಗುರವನ್ನು ಹಾಕಿ ಹುಡುಕುವಂತೆ ಹೇಳುವರು. ಇಬ್ಬರು ಏಕಕಾಲದಲ್ಲಿ ಬಿಂದಿಗೆಯಲ್ಲಿ ಕೈಯ್ಯಾಕಿ ಉಂಗುರ ಹುಡುಕುವರು. ಯಾರು ಹೆಚ್ಚು ಬಾರಿ ಉಂಗುರ ಪಡೆಯುವರೋ ಅದನ್ನು ಗಮನಿಸಿ ಗಂಡಿಗೆ ಸಿಕ್ಕರೆ, ಗಂಡು ಮಗುವಾಗುವುದೆಂದು, ಹೆಣ್ಣಿಗೆ ಸಿಕ್ಕರೆ ಹೆಣ್ಣು ಮಗುವಾಗುವುದೆಂದು ನಂಬುರುವರು. ಈ ಎಲ್ಲಾ ಶಾಸ್ತ್ರಗಳಲ್ಲಿಯೂ ಮುತ್ತೈದೆಯರು ಪ್ರಮುಖ ಪಾತ್ರ ವಹಿಸುವರು.

**ಬೀಗರ ಮನೆಯ ಔತಣಕೂಟ:**

ಮುಹೂರ್ತವಾದ ಮರುದಿನ ಅಂದರೆ ಮದುವೆಯ ಮೂರನೇ ದಿನ ಗಂಡಿನ ಮನೆಗೆ ಗಂಡು ಹೆಣ್ಣುಗಳು ಹೋಗುವ ಪದ್ಧತಿಯುಂಟು. ಅಂದು ಬೀಗರ ಮನೆಯಲ್ಲಿ ಊರಿನ ಜನರಿಗೆ ಅಡಿಗೆ ಮಾಡಿಸಿ ಬಡಿಸುವರು. ಹಾಗೂ

ಹೆಣ್ಣಿನ ಕಡೆಯವರು ಬೀಗರ ಮನೆಗೆ ಬರುವ ವಾಡಿಕೆ ಇದೆ. ಕೆಲವರು ಇತ್ತೀಚಿಗೆ ಮಾಂಸಾಹಾರ ಮಾಡಿಸುವುದುಂಟು. ಆದರೆ ಕುಂಚಿಟಿಗರಲ್ಲಿ ಸಿಹಿ ಊಟವೇ ಹೆಚ್ಚು ಪ್ರಧಾನವಾಗಿದೆ. ಹೆಣ್ಣಾದವಳು ಮೊದಲಬಾರಿ ತವರನ್ನು ತೊರೆದು ಗಂಡನ ಮನೆಗೆ ಹೊರಡುವಾಗ ಊರಿನ ಕುಲಸ್ಥರ ಮನೆಗೆ ತೆರಳಿ ಮಡಿಲು ತುಂಬಿಸಿಕೊಂಡು ಎಲ್ಲರನ್ನೂ ಗಂಡಿನ ಊರಿಗೆ ಬರುವಂತೆ ಆಹ್ವಾನಿಸುವಳು. ತನ್ನ ನೆರೆಹೊರೆಯ, ಓರಗೆಯವರನ್ನು ಆಹ್ವಾನಿಸಿ ಬರುವಳು. ಅಂದು ಅವಳ ಜೊತೆಯಲ್ಲಿ ತನ್ನ ತಾಯಿಯು ಬರುವಂತಿಲ್ಲ ತಂದೆ, ಅಣ್ಣ, ಅತ್ತಿಗೆ, ಅಕ್ಕ ತಂಗಿಯರು ಬರುವುದುಂಟು. ತಾನು ಹೊರಡುವಾಗ ತವರಿನವರನ್ನು ತೊರೆದು ಹೋಗುವೆನೆಂಬ ಸಂಕಟ. ದುಃಖದಿಂದ ತನ್ನವರನ್ನು ನೆನೆದು ದುಃಖಿ ಸುವುದುಂಟು. ತಾಯಿಯು ತನ್ನ ಕರುಳ ಬಳ್ಳಿ ದೂರಾಗುವುದನ್ನು ನೆನೆದು ದುಃಖಿಸುವಳು. ಹೀಗೆ ಹೊರಟ ಗಂಡು ಹೆಣ್ಣುಗಳು ಗಂಡಿನ ಊರನ್ನು ತಲುಪಿ ದೇವಸ್ಥಾನ ಅಥವಾ ಶಾಲೆಯಲ್ಲಿ ಉಳಿಯುವರು. ಎಲ್ಲರ ಊಟ ವಾದ ಬಳಿಕ ಗಂಡು ಹೆಣ್ಣನ್ನು ಅಲಂಕರಿಸಿ ದೇವಸ್ಥಾನದ ಮುಂದೆಯೇ ಅವರನ್ನು ಕೂರಿಸಿ ಹಿಂದೆ ಮಾಡಿದಂತೆ ಸೇಸೆ ಹಚ್ಚುವರು. ನಂತರ ತಾಂಬೂಲವನ್ನು ಹಂಚಿ, ಮೆರವಣಿಗೆ ಮೂಲಕ ಗಂಡಿನ ಮನೆಗೆ ಕರೆತರುವರು.

ಇಲ್ಲೂ ಸಹ ಬಾಗಿಲು ತಡೆಯುವ ಶಾಸ್ತ್ರ ಹಿಂದಿನಂತೆಯೇ ನಡೆಯುವುದು ನಂತರ ಅರತಿ ಬೆಳಗಿ ಹೆಣ್ಣನ್ನು ಬಲಗಾಲಿಟ್ಟು ಒಳಬರುವಂತೆ ಹೇಳಿ ಒಂದು ಪಡಿಯಲ್ಲಿ ಅಕ್ಕಿಯನ್ನು ತುಂಬಿ ಬಾಗಿಲ ಒಳಗಡೆ ಇಡುವರು. ಅದಕ್ಕೆ ಹೂವನ್ನು ಹಾಕಿ, ಬೆಲ್ಲದ ಹಚ್ಚನ್ನು, ಗೆಜ್ಜೆ ಭತ್ತಿಯನ್ನು ಹಚ್ಚಿ ಇಟ್ಟು ಬಲಗಾಲಲ್ಲಿ ಒದ್ದು ಒಳಬರುವಂತೆ ಹೇಳುವರು. ಅದೇರೀತಿ ಹೆಣ್ಣಾದವಳು ಪಡಿಯನ್ನು ಒದ್ದು ಕುಲದೇವರನ್ನು ನೆನೆದು ಒಳಬಂದು ದೇವರ ಮನೆಯಲ್ಲಿ ದೀಪವನ್ನು ಹಚ್ಚುವ ಮೂಲಕ ಮನೆಯನ್ನು ಬೆಳಗುವಳು.

ಆದಾದ ಮರುದಿನ ಹೆಣ್ಣು ಗಂಡುಗಳು ಹೆಣ್ಣಿನ ಮನೆಗೆ ಮರಳುವರು. ಅಲ್ಲಿಂದ ಮುಂದೆ ಸಣ್ಣ ಪುಟ್ಟ ಶಾಸ್ತ್ರಗಳು ನಡೆಯುತ್ತವೆ. ಅಲ್ಲಿಯವರೆಗೂ ಕಳಸವನ್ನು ಕದಲಿಸದೇ ಹಾಗೆ ಇಟ್ಟಿರುತ್ತಾರೆ.

**ಸಂಚಿಕಟ್ಟುವುದು:**

ಮುಹೂರ್ತದ ಐದನೇ ದಿನ ಗಂಡಿನ ಮನೆಯವರು ಗಂಡನ್ನು ಕರೆಯಲು ಬರುವರು. ಅಂದು ಹೆಣ್ಣಿನ ಮನೆಯಲ್ಲಿ ಸಿಹಿಯನ್ನು ಮಾಡಿ ಗಂಡಿನ ಕಡೆಯುವರಿಗೆ ಬಡಿಸುವರು. ನಂತರ ಗಂಡು ಹೆಣ್ಣನ್ನು ಕೂರಿಸಿ ಶಾಸ್ತ್ರ ಮಾಡಿ ಒಂದು ಬಿಳಿ ಪಂಚೆಯಲ್ಲಿ ಸಿಹಿ ತಿನಿಸುಗಳಾದ ಕಡ್ಲೆವುಂಡೆ, ಬುರುಗಿನುಂಡೆ, ಎಳ್ಳುಂಡೆ, ಚಕ್ಕಲಿ, ಕೋಡುಬೆಳೆ, ಮಿಟಾಯಿ, ಎಲೆ ಅಡಿಕೆ, ಬಾಳೆಹಣ್ಣು, ತೆಂಗಿನ ಕಾಯಿಗಳನ್ನು ಕಟ್ಟಿ ಗಂಡಿಗೆ ಸಂಚಿ ಕಟ್ಟುವರು. ಗಂಡಾದವನು ಅದನ್ನು ನೆಲದ ಮೇಲಿಡದೆ ತನ್ನ ಮನೆಗೆ ಹೋಗಿ ಗೋಡೆಗೆ ನೇತು ಹಾಕಿ, ಸಂಜೆ ಕೈಕಾಲು ತೊಳೆದು ಸಂಚಿ ಗಂಟನ್ನು ಬಿಚ್ಚಿ ಎಲ್ಲರೂ ತಿನ್ನವರು. ಇದನ್ನು “ಸಿಗಳೀಗಂಟು” ಕಟ್ಟುವದು ಎನ್ನುವರು.

**ನಿಷೇಕ ಅಥವಾ ಪ್ರಸ್ತದ ಶಾಸ್ತ್ರ:**

ಮದುವೆಯಾದ ಎಂಟತ್ತು ದಿನಗಳಲ್ಲಿ ಒಂದು ಶುಭದಿನ, ಮುಹೂರ್ತ, ಘಳಿಗೆಯನ್ನು ಪುರೋತರಿಂದ ತಿಳಿದುಕೊಂಡು ಈ ಶಾಸ್ತ್ರವನ್ನು ಹೆಣ್ಣಿನ ಮನೆಯಲ್ಲಿ ನಡೆಸುವರು. ಗಂಡು ಹೆಣ್ಣುಗಳು ತಮ್ಮ ದಾಂಪತ್ಯ ಜೀವನಕ್ಕೆ ಕಾಲಿಡುವ ಅಥವಾ ಎರಡು ಮನಸ್ಸುಗಳು ಸಮಾಗಮವಾಗುವ ಮೊದಲ ದಿನವನ್ನು "ನಿಷೇಕ ಅಥವಾ ಪ್ರಸ್ತದ ಶಾಸ್ತ್ರ" ಎಂದು ಕರೆಯುವರು. ಅದೇ ಸಿಂಗಾರ, ಸಂಭ್ರಮದಲ್ಲಿ ಮಿಂದು ದಂಪತಿಗಳು ಮೈಮರೆತು ಒಂದಾಗುವ "ಮೊದಲರಾತ್ರಿ" ಎನ್ನುವರು. ಸಾಮಾನ್ಯವಾಗಿ ಹೆಣ್ಣಿಗೆ ಋತು ಚಕ್ರವಿಲ್ಲದ ದಿನಗಳಲ್ಲಿ ಈ ಶಾಸ್ತ್ರವನ್ನು ಅಕೆಯ ತವರು ಮನೆಯಲ್ಲಿ ಮಾಡುವವರು. ಹೆಣ್ಣು ಗಂಡುಗಳನ್ನು ಕೂರಿಸಿ ಅರಿಶಿನ ಕುಂಕುಮ ಹಚ್ಚಿ ಅಕ್ಷತೆ ಹಾಕಿ ಹಾರೈಸಿ ಪ್ರಸ್ತದ ಕೋಣೆಗೆ ಬಿಡುತ್ತಾರೆ. ಅಂದು ಗಂಡಿನ ಗೆಳೆಯರು, ಅಕ್ಕ ತಂಗಿಯರು, ಸಂಬಂಧಿಗಳು, ಹೆಣ್ಣಿನ ಕಡೆಯವರು ಎಲ್ಲ ಸೇರಿ ಸಿಹಿ ಊಟ ಮಾಡುವರು. ಮುತ್ತೈದೆಯರು ತಟ್ಟೆಯಲ್ಲಿ ಸಿಹಿ ತಿನಿಸುಗಳು, ಹಣ್ಣು ಹಂಪಲು, ಒಂದು ಬೆಳ್ಳಿ ಲೋಟದಲ್ಲಿ ಸಿಹಿಯಾದ ಹಾಲನ್ನು ನೀಡಿ ಕಳಿಸುತ್ತಾರೆ. ಅವೇಳೆಗಾಗಲೆ ಮಲಗುವ ಕೋಣೆಯಲ್ಲಿ ಹಾಸಿಗೆ ಸಿದ್ದವಾಗಿ ಅಲಂಕೃತಗೊಂಡು, ಹೂವನ್ನು ಚೆಲ್ಲಿ ಸಿಂಗರಿಸಲಾಗಿರುತ್ತದೆ. ಹಾಲನ್ನು ತೆಗೆದುಕೊಂಡ ಹೆಣ್ಣು ತಂದೆ ತಾಯಿಗಳಿಗೆ ನಮಿಸಿ ಗಂಡನ ಕೋಣೆಗೆ ಪ್ರವೇಶಿಸುತ್ತಿದ್ದಂತೆ. ಬಾಗಿಲು ಮುಚ್ಚುತ್ತಾರೆ. ಹಳ್ಳಿಗಳ ಕಡೆ ಈ ಶಾಸ್ತ್ರವನ್ನು "ಸೋಬನ / ಶೋಬನ" ಎಂದು ಕರೆಯುವುದುಂಟು. ತಮ್ಮ ಬಾಳಿನ ಭಾವನೆಗಳಿಗೆ ಸ್ಪಂದಿಸಿ ಹೆಣ್ಣು ಗಂಡುಗಳು ಮೈಥುನ ಕ್ರಿಯಯಲ್ಲಿ ತೊಡುಗುವ ಈ ಶಾಸ್ತ್ರದೊಂದಿಗೆ ಮದುವೆಗೆ ಸಂಬಂಧ ಪಟ್ಟ ಎಲ್ಲಾ ಆಚರಣೆಗಳು ಮುಕ್ತಾಯಗೊಳ್ಳುತ್ತವೆ.

**ಹೊಲಸು ಮುಟ್ಟಿಸುವುದು:**

ಪ್ರಸ್ತ ಶಾಸ್ತ್ರ ಮುಗಿದ ಒಂದೆರಡು ದಿನಗಳಲ್ಲಿ ಹಸೀ ಮೈಗಳಿಂದ ಇರುವ ಗಂಡು ಹೆಣ್ಣುಗಳಿಗೆ ಹೆಣ್ಣಿನ ಮನೆಯಲ್ಲಿ "ಮಾಂಸಹಾರ" ಮಾಡಿ ಬಡಿಸುವುದುಂಟು. ಅಂದೂ ಸಹ ಗಂಡಿನ ಮನೆಯವರನ್ನು ಆಹ್ವಾನಿಸಿ ಸಡಗರ ಸಂಭ್ರಮದಿಂದ ಊಟೋಪಚಾರಗಳನ್ನು ಮಾಡಿ ಸಂಭ್ರಮಿಸುವರು. ಅದಾದ ಮರುದಿನ ಹೆಣ್ಣನ್ನು ತವರು ಮನೆಯಿಂದ ಗಂಡನ ಮನೆಗೆ ಕಳಿಸುತ್ತಾರೆ. ಅವಳ ಜೊತೆಯಲ್ಲಿ ಒಂದು ಚಿಕ್ಕ ಹುಡುಗಿಯನ್ನು ಕಳಿಸುವರು. ಅಂದು ಗಂಡನ ಮನೆಯಲ್ಲಿ ಅಕೆ ಊಟ ಮಾಡುವಂತಿಲ್ಲ. ಆ ಊರಿನ ತನ್ನ ತವರಿನ ಕುಲಸ್ತರ ಮನೆಯಲ್ಲಿ ಊಟ ಮಾಡುವಂತಿಲ್ಲ ಎಂಬ ಪದ್ಧತಿಯುಂಟು. ಹೀಗೆ ಸಂಪ್ರದಾಯಗಳು ಇಂದಿಗೂ ಸಹ ನಡೆಯುತ್ತಾ ಬಂದಿರುವುದನ್ನು ಗಮನಿಸಬಹುದು.

ಒಟ್ಟಾರೆ ಕುಂಚಿಟಿಗ ಜನಾಂಗವು ವಿವಾಹ ಸಂದರ್ಭಗಳಲ್ಲಿ ತಮ್ಮದೇ ಆದ ಕೆಲವೊಂದು ಶಾಸ್ತ್ರಗಳನ್ನು ನಡೆಸಿಕೊಂಡು, ಕಾಪಾಡಿಕೊಂಡು, ಮುಂದಿನ ಪೀಳಿಗೆಗೆ ಧಾರೆ ಎರೆದುಕೊಂಡು ಬಂದಿದೆ. ಕೃಷಿಯೇ ಮುಖ್ಯ ಕಸುಬುಳ್ಳ ಇವರು ತಮ್ಮ ಮದುವೆಯ ಆಚರಣೆಗಳಲ್ಲಿ ಅವುಗಳನ್ನು ಅಳವಡಿಸಿಕೊಂಡು ಬಂದಿದೆ. ಪ್ರಸ್ತುತ ದಿನಗಳಲ್ಲಿ ಪಾಶ್ಚಾತ್ಯೀಕರಣ,

ಜಾಗೃತೀಕರಣ, ತಂತ್ರಜ್ಞಾನದ ಭರಾಟೆಯರಲ್ಲಿ ಮುಳುಗಿ ಎಷ್ಟೋ ಆಚರಣೆಗಳು ಅಲ್ಪ ಸ್ವಲ್ಪ ಬದಲಾವಣೆಗೊಂಡು ಬಳಿಕೆಯಲ್ಲಿವೆ. ಕೆಲವೊಂದು ಕಣ್ಮರೆಯಾಗಿವೆ. ಅದರಲ್ಲೂ ನಾಗರೀಕ ಸಮಾಜವೆನಿಸಿಕೊಂಡ ಪಟ್ಟಣ ಸಂಸ್ಕೃತಿಯಲ್ಲಿ, ಕಲ್ಯಾಣ ಮಂಟಪಗಳ ಸಂಸ್ಕೃತಿಯಲ್ಲಿ ಇವು ಮಾಯವಾಗುತ್ತಾ ಸರಳ ರೀತಿಯಲ್ಲಿ ಮದುವೆಗಳು ನಡೆಯುತ್ತವೆ. ಆದರೆ ಇಂದಿಗೂ ಹಳ್ಳಿಗಳಲ್ಲಿ ಸಂಪ್ರದಾಯವಾಗಿ, ಶಾಸ್ತ್ರೋಕ್ತವಾಗಿ, ಸಡಗರ, ಸಂಭ್ರಮದಿಂದ ಆಚರಿಸಲ್ಪಡುತ್ತಿರುವುದನ್ನು ಗಮನಿಸಬಹುದು. ಏನೆ ಇದ್ದರೂ ಭಾರತೀಯ ಸಂಪ್ರಾದಾಯವು ವಿಭಿನ್ನ ರೀತಿಯ ಮದುವೆ ಆಚರಣೆಗಳನ್ನು ಒಳಗೊಂಡಿದ್ದರೂ, ಕುಂಚಿಟಿಗ ಜನಾಂಗವು ತಮ್ಮದೇ ಅದ ಆಚರಣೆಗಳನ್ನು ತಪ್ಪದೇ ನಡೆಸಿಕೊಂಡು ಬರುವ ಮೂಲಕ ಕುಂಚಿಟಿಗರ ಜನಾಂಗದ ಸಾಂಸ್ಕೃತಿಕ ಅನನ್ಯತೆಯನ್ನು ಕಾಂಪಾಡಿಕೊಂಡು ಬಂದಿದೆ ಎನ್ನುವುದು ಅಕ್ಷರಶ ಸತ್ಯವಾಗಿದೆ.

---

1. ಗಂಗಡಿಕಾರ ಒಕ್ಕಲಿಗ : ಸಂಶೋಧನಾ ಪ್ರಬಂಧ ಲೆ. ಡಾ// ನಲ್ಲೂರ್ ಪ್ರಸಾದ್
2. ಕುಂಚಿಟಗರ ಮದುವೆ ಸಂಪ್ರಾದಯಗಳು ಒಂದು ಅಧ್ಯಯನ : ಲೇ ಹೆಚ್.ಬಿ. ಶಿವಕುಮಾರ್ ಪು.ಸಂ.39
3. ಕುಂಚಿಟಗರ ಮದುವೆ ಸಂಪ್ರಾದಯಗಳು ಒಂದು ಅಧ್ಯಯನ : ಲೇ ಹೆಚ್.ಬಿ. ಶಿವಕುಮಾರ್ ಪು.ಸಂ.28
4. ಕುಂಚಿಟಗರ ಮದುವೆ ಸಂಪ್ರಾದಯಗಳು ಒಂದು ಅಧ್ಯಯನ : ಲೇ ಹೆಚ್.ಬಿ. ಶಿವಕುಮಾರ್ ಪು.ಸಂ.51
5. ಕುಂಚಿಟಗರ ಇತಿಹಾತ ಮತ್ತು ಸಂಸ್ಕೃತಿ ದರ್ಶನ : ದರ್ಶನ ಡಾ. ವಿ. ಆಂಜಿನಪ್ಪ ಪು.ಸಂ.43
6. ಕುಂಚಿಟಗರ ಮದುವೆ ಸಂಪ್ರಾದಯಗಳು ಒಂದು ಅಧ್ಯಯನ : ಲೇ ಹೆಚ್.ಬಿ. ಶಿವಕುಮಾರ್ ಪು.ಸಂ.57

## ಅಧ್ಯಾಯ-7

## ಕುಂಚಿಟಿಗರ ಮತ್ತು ಇತರೆ ಒಕ್ಕಲಿಗರ ಒಳ ಪಂಗಡದಲ್ಲಿರುವ ಮದುವೆಯ ಭಿನ್ನತೆ ಮತ್ತು ಸಾಮ್ಯತೆಗಳು

''ಮದುವೆಗಳು ಸ್ವರ್ಗದಲ್ಲಿಯೇ ನಿಶ್ಚಯವಾಗಿರುತ್ತವೆ'' ಎಂಬತೆ ''ಏಳೇಳು ಜನ್ಮದ ಋಣಾನುಬಂಧ'' ಎಂಬ ಮಾತುಗಳು ಮದುವೆಗೆ ಸಂಬಂಧಪಟ್ಟಂತೆ ಕೇಳಿ ಬರುತ್ತವೆ. ಆದ್ದರಿಂದಲೇ ಮಾನವ ಜನಾಂಗಕ್ಕೆ ಮದುವೆಯು ಒಂದು ಪ್ರಮುಖವಾದ ಶಾಸ್ತ್ರವಾಗಿದೆ. ಈ ಆಚರಣೆಗಳು ಧರ್ಮದಿಂದ ಧರ್ಮಕ್ಕೆ, ಜಾತಿಯಿಂದ ಜಾತಿಗೆ ಭಿನ್ನವಾಗಿರುತ್ತವೆ. ಅಷ್ಟೇಏಕೆ ಕೆಲವೊಂದು ಜಾತಿಯಲ್ಲಿ ಹಲವಾರು ಬೆಡಗುಗಳ ನಡುವೆಯೇ ಆಚರಣೆಗಳಲ್ಲಿ ಭಿನ್ನತೆಯನ್ನು ಕಾಣಬಹುದು. ಆದುದರಿಂದ ಈ ಅಧ್ಯಾಯದಲ್ಲಿ ಒಕ್ಕಲಿಗ ಜಾತಿಯ ಕೆಲವು ಪ್ರಮುಖ ಒಳ ಪಂಗಡಗಳಲ್ಲಿ ಮತ್ತು ಕುಂಚಿಟಿಗ ಜನಾಂಗದಲ್ಲಿ ಕಂಡು ಬರುವ ಆಚರಣೆಗಳ ಭಿನ್ನತೆ ಮತ್ತು ಸಾಮ್ಯತೆಗಳನ್ನು ಗುರ್ತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕರ್ನಾಟಕದಲ್ಲಿ ಒಕ್ಕಲಿಗ ಜಾತಿಯಲ್ಲಿ ಅತೀ ಪ್ರಭಲವಾದುದು ''ಗಂಗಟಿಕಾರ'' ಒಕ್ಕಲಿಗ ಎಂಬ ಉಪ ಪಂಗಡ, ಒಕ್ಕಲಿಗರಲ್ಲಿ ಅತಿ ಹೆಚ್ಚು ಜನ ಸಂಖ್ಯೆಯನ್ನು ಹೊಂದಿರುವ ಪಂಗಡ. ಈ ಗಂಗಟಿಕಾರರು ಪ್ರಮುಖವಾಗಿ ಕರ್ನಾಟಕದ ಹಾಸನ, ಮಂಡ್ಯ, ಮೈಸೂರು, ಬೆಂಗಳೂರು, ಗ್ರಾಮಾಂತರ ಜಿಲ್ಲೆ ಮತ್ತು ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಕಂಡುಬರುತ್ತಾರೆ. ಇವರಲ್ಲಿ ಎರಡು ಪ್ರಧಾನ ಗುಂಪುಗಳು ಕಂಡುಬರುತ್ತಾರೆ. ಒಂದು ಪೆಟ್ಟಿಗೆಯವರು, ಎರಡು ಬುಜ್ಜಣಿಗೆಯವರು. ಅದೇ ರೀತಿ ಧಾರ್ಮಿಕ ಹಿನ್ನಲೆಯಲ್ಲಿ ಎರಡು ಗುಂಪುಗಳನ್ನು ಕಾಣಬಹುದು ಒಂದು ಮುಳ್ಳು ಒಕ್ಕಲಿಗ, ಎರಡು ದಾಸ ಒಕ್ಕಲಿಗ. ಮುಳ್ಳು ಒಕ್ಕಲಿಗರು ಶೈವ ಧರ್ಮೀಯರಾದರೆ, ದಾಸ ಒಕ್ಕಲಿಗರು ವೈಷ್ಣವ ಧರ್ಮಕ್ಕೆ ನಡೆದುಕೊಳ್ಳುವರೆಂದು ಡಾ//ನಲ್ಲೂರ್ ಪ್ರಸಾದ್ ತಮ್ಮ ಪ್ರಬಂಧದಲ್ಲಿ ತಿಳಿಸುತ್ತಾರೆ. ಕುಂಚಿಟಿಗರಲ್ಲಿರುವಂತೆ, ಗಂಗಟಿಕಾರ ಒಕ್ಕಲಿಗರಲ್ಲಿ 42 ಗೋತ್ರಗಳಿವೆಯೆಂದು ಅವರು ಹೇಳುತ್ತಾರೆ.

ಕುಂಚಿಟಿಗ ಮತ್ತು ಗಂಗಟಿಕಾರರಲ್ಲಿ ಮದುವೆ ಎನ್ನುವುದು ಮನುಷ್ಯನ ಜೀವನದಲ್ಲಿ ಬರುವ ಒಂದು ಪ್ರಮುಖ ಘಟ್ಟವೆಂದು ಭಾವಿಸಲಾಗಿದೆ. ಈ ಎರಡೂ ಪಂಗಡಗಳಲ್ಲಿ ಹಿಂದೆ ಬಾಲ್ಯ ವಿವಾಹ ಪದ್ಧತಿ ರೂಢಿಯಲ್ಲಿತ್ತು. ಆದರೆ ಕಾಲಕ್ರಮೇಣ ಕಡಿಮೆಯಾಗುತ್ತಾ ಬಂದಿದೆ. ಜೀವನಾವರ್ಥದ ಪಥದಲ್ಲಿ ಜನಪದ ಜಗತ್ತು ಮದುವೆಗೆ ಬಹಳ ಮಹತ್ವದ ಸ್ಥಾನವನ್ನು ನೀಡಿದೆ. ಅದರಂತೆ ಗಂಡು ಹೆಣ್ಣಿನ ಸಂಬಂಧವನ್ನು ಕಾನೂನು ಬದ್ಧಗೊಳಿಸಿದೆ. ಸಂತಾನಾಭಿವೃದ್ಧಿ ಮಾಡಲು ಅನುವು ಮಾಡಿಕೊಟ್ಟಿದೆ. ಒಂದು ಕುಟುಂಬದ ರಚನೆಯ ಚಾಲಕ ಶಕ್ತಿಯೆಂದರೆ ಅದು ಮದುವೆ ಮಾತ್ರ. ಸೋದರ ಮಾವ ಮತ್ತು ಅವನ ಮಕ್ಕಳ ಜೊತೆ ಈ ಎರಡು ಪಂಗಡಗಳಲ್ಲಿ ಮದುವೆಯಾಗಲು ಸಮ್ಮತವಿದೆ. ಹಾಗೆಯೇ ಕುಲ, ಬೆಡಗುಗಳ ಆಧಾರದ ಮೇಲೆ ಅಣ್ಣ-ತಂಗಿಯರ, ದಾಯಾದಿಗಳ ಮಕ್ಕಳ ನಡುವಿನ ಮದುವೆಗಳು ನಿಶಿಷ್ಧದ್ದ. ಒಂದು ವೇಳೆ

ನಡೆದರೆ ಆ ಕುಟುಂಬ, ಕುಲದವರಿಗೆ ಅಪಾಯ ತಪ್ಪಿದ್ದಲ್ಲ ಎಂಬ ಬಲವಾದ ನಂಬಿಕೆಯೂ ಇದೆ. ಅಲ್ಲದೆ ಒಂದೇ ಗೋತ್ರ, ಬೆಡಗುಗಳ ನಡುವಿನ ಮದುವೆಗಳು ನಡೆಯುವಂತಿಲ್ಲ. ಇವುಗಳು ಅವರವರ ತಂದೆ ತಾಯಿಯಿಂದ ತಿಳಿದು ಬರುತ್ತವೆ. "ಸ್ವಚ್ಛಂದ" ವಾದ ಲೈಂಗಿಕತೆಗೆ ಕಡಿವಾಣ ಹಾಕಲೆಂದೇ "ಮದುವೆ" ಎಂಬ ಸಂಪ್ರದಾಯವನ್ನು ಕಂಡುಕೊಂಡರು. ಸಮಾಜದ ನೀತಿ ನಿಯಮಗಳಿಗೊಳಪಟ್ಟ "ದಾಂಪತ್ಯ ಸುಖ"ವನ್ನು ಅನುಭವಿಸುವುದರಿಂದ ಒಂದು ಸಮಾಜದಲ್ಲಿ ಆರೋಗ್ಯಕರವಾದ ವಾತಾವರಣ ನಿರ್ಮಾಣವಾಗುತ್ತದೆ ಎಂಬ ನಂಬಿಕೆಯಿಂದ ಈ ಮದುವೆ ಆಚರಣೆ ಜಾರಿಗೆ ತರಲಾಗಿದೆ ಎಂದು ಖಚಿತವಾಗಿ ಹೇಳಬಹುದು. ವೈಜ್ಞಾನಿಕ ದೃಷ್ಟಿಯಿಂದ ಹೆಣ್ಣು ಗಂಡುಗಳನ್ನು ಕೊಟ್ಟು ತರುವಲ್ಲಲ್ಲಿ ಕುಲ (ಬೆಡಗು) ಪ್ರಮುಖ ಪಾತ್ರವಹಿಸ ತೊಡಗಿದವು.

ಮದುವೆ ಎಂದರೆ ಸಂಭ್ರಮ, ಸಂತೋಷ, ಸಡಗರದಿಂದ ನಡೆಯುವಂತದು, ಮದುವೆಗೆ ಸಂಬಂಧಿಸಿದ ಸಂಪ್ರದಾಯ, ಆಚರಣೆಗಳು ವೈಶಿಷ್ಟ್ಯ ಪೂರ್ಣ ಮತ್ತು ವೈವಿದ್ಯ ಮಯವಾಗಿವೆ. ಜೊತೆಗೆ ಸಾಂಸ್ಕೃತಿಕ ಸಮನ್ವಯತೆಯನ್ನು ಕಾಯ್ದುಕೊಳ್ಳುವಲ್ಲಿ ಮದುವೆ ಮಹತ್ವದ ಪಾತ್ರವಹಿಸಿದೆ. ಹಿಂದೆ ಹಳ್ಳಿಗಳಲ್ಲಿ ಎಂಟು ಹತ್ತು ದಿನಗಳು ವಿಜೃಂಭಣೆಯಿಂದ ಊರಿಗೆ ಊರೇ ಸಿಂಗಾರಗೊಂಡು ನಡೆಯುತ್ತಿದ್ದವು. ಆದರೆ ಇತ್ತೀಚಿಗೆ ಮೂರು ದಿನಕ್ಕೆ ಸೀಮಿತಗೊಂಡು, ಈಗ ನಗರ ಪ್ರದೇಶಗಳಲ್ಲಿ ಕಲ್ಯಾಣ ಮಂಟಪಗಳು ಬಂದಮೇಲೆ ಒಂದೇ ದಿನಕ್ಕೆ ಮುಕ್ತಾಟವಾಗಯತ್ತವೆ. ಬಂಧು ಭಾಂಧವರೊಡಗೂಡಿ ಸಂಪ್ರದಾಯ ಬದ್ಧವಾಗಿ ಏಳೆಂದು ದಿನ ನಡೆಯುತ್ತದೆ ಮದುವೆಗಳು ಒಂದು ರಾತ್ರಿಗೆ ಸೀಮಿತಗೊಳಿಸಿ ಬೆಳಿಗ್ಗೆ ಮದುವೆ ಮುಗಿಸುವ ಹಂತಕ್ಕೆ ಬಂದು ತಲುಪಿದೆ. ಈ ರೀತಿ ನಡೆಯುವುದರಿಂದ ಹಿಂದಿನಿಂದಲೂ ವಿಧಿಬದ್ಧವಾಗಿ ನಡೆದು ಬಂದ ಆಚರಣೆಗಳು ನಮ್ಮಿಂದ ದೂರವಾಗಿ ಕಣ್ಮರೆಯಾಗುತ್ತಿವೆ. ಜೊತೆಗೆ ಮುಂದಿನ ಜನಾಂಗಕ್ಕೆ ಇವುಗಳ ಸುಳಿವೇ ಸಿಗದಂತಾಗುತ್ತವೆ ಎಂಬ ಆತಂಕ ಕಾಡುತ್ತದೆ.

ಹಿಂದೆ ನಡೆಯುತ್ತಿದ್ದ ಏಳೆಂಟು ದಿನಗಳ ಆಚರಣೆಗಳನ್ನು ಮಾಡುವಷ್ಟು ವ್ಯವದಾನ ಇಂದಿನ ಜನರಿಗೆ ಇಲ್ಲದಂತಾಗಿದೆ. ಜೊತೆಗೆ ಅದ್ದೂರಿಯಾಗಿ ಒಂದೇ ದಿನದಲ್ಲಿ ಶಾಸ್ತ್ರಗಳನ್ನು ಮುಗಿಸಿ ಮದುವೆ ಮಾಡುವುದು ಒಂದು ಪ್ರತಿಷ್ಠೆಯಾಗಿ ಇಂದು ಕಂಡು ಬರುತ್ತದೆ. ಆದುದರಿಂದ ಇಂದಿನ ಮದುವೆಗಳಲ್ಲಿ ಯಾವುದೇ ಸಂಭ್ರಮ ಸಂತೋಷಗಳು ಹೆಚ್ಚು ದಿನ ಇರದೆ ಕೆಲವೇ ಕ್ಷಣಗಳಿಗೆ ಸೀಮಿತವಾಗಿ ನೀರಸವಾಗಿದೆ.

ಯಾವುದೇ ಒಂದು ಆಚರಣೆ ಸಮಾಜದಲ್ಲಿದೆ ಎಂದರೆ ಅದಕ್ಕೆ ತನ್ನದೇ ಆದ ಪರಂಪರೆ ಇರುತ್ತದೆ. ಬಹು ಪಾಲು ಆಚರಣೆಗಳು, ಸಾಂಸ್ಕೃತಿಕ ವೈವಿಧ್ಯಗಳು ನೈಜತೆಯ ಹಿನ್ನಲೆಯನ್ನು ಒಳಗೊಂಡಿರುತ್ತವೆ. ಹಾಗೆ ಧಾರ್ಮಿಕ ಆಚರಣೆಗಳು ಇದ್ದಕ್ಕಿದಂತೆ ಹುಟ್ಟಿ ನಶಿಸುವುದಿಲ್ಲ. ಬದಲಾಗಿ ಕಾಲಾಂತರದಲ್ಲಿ ರೂಪಾಂತರಗೊಂಡು ಬದಲಾಗಬಹುದು. ಯಾವುದೇ ಒಂದು ಆಚರಣೆಯ ಹಿಂದೆ ಲೌಖಿಕ ಮತ್ತು ಅಲೌಖಿಕ ಒತ್ತಡಗಳು ಕೆಲಸ ಮಾಡುತ್ತವೆ. ಅವುಗಳ ಸತ್ಯಾ

ಸತ್ಯತೆಗಳನ್ನು ತಿಳಿಯಲು ಮುಂದಾದಾಗ ಮಾತ್ರ ಒಂದು ಪ್ರದೇಶದ ಆರ್ಥಿಕ, ಧಾರ್ಮಿಕ ಸಾಂಸ್ಕೃತಿಕ ರಾಜಕೀಯ ಸ್ಥಿತಿಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಆಚರಣೆಗಳು ಒಂದು ಸಮಾಜದ, ಸಮುದಾಯದ ಕ್ರಿಯಾತ್ಮಕ ಪಠ್ಯಗಳಾವೆ. ಇಲ್ಲಿ ಹಾಡು ಕತೆಗಳಂತ ಮೌಖಿಕ ಪಠ್ಯಗಳಲ್ಲದೆ. ವಾದ್ಯದಸದ್ದು, ನೃತ್ಯ, ಉತ್ಸಾಹ, ಮೌನ, ವ್ರತ, ಪೂಜೆ ಮುಂತಾದ ಕ್ರಿಯಾತ್ಮಕ ಅಂಶಗಳು ಇರುತ್ತವೆ. ಇಂದು ಆಚರಣೆಗಳು ಸಂಸ್ಕೃತೀಕರಣಗೊಂಡು, ಎಷ್ಟೊ ಜನಪದ ಮೂಲವಾದ ಆಚರಣೆಗಳು ಸಂಸ್ಕೃತವನ್ನೋ ಅಥವಾ ಮೇಲ್ವರ್ಗದ ಪೂಜಾ ವಿಧಾನವನ್ನೋ ಅನುಸರಿಸಿ ಪರಿವರ್ತನೆಗೊಳುತ್ತಿವೆ. ಇಲ್ಲಿ ಅನೇಕ ಕಾಲ ಘಟ್ಟಗಳು ಅಸಂಖ್ಯಾತ ಅನುಭವಗಳು ಒಟ್ಟಿಗೆ ಸೇರಿದಾಗ ನಂಬಿಕೆ, ಆಚರಣೆ, ಸಂಪ್ರದಾಯ ಸಂಸ್ಕೃತಿಗಳ ಹುಟ್ಟಿಗೆ ಕಾರಣವಾಗುತ್ತವೆ.

ಕುಂಚಿಟಿಗ ಮತ್ತು ಗಂಗಟಿಗಾರಲ್ಲಿ ಮದುವೆಯ ಆಚರಣೆಗಳು ಹೆಣ್ಣಿನ ಅನ್ವೇಷಣೆಯಿಂದ ಪ್ರಾರಂಭವಾಗಿ ಪ್ರಸ್ತದ ವರೆಗೂ ನಡೆಯುತ್ತವೆ. ಮದುವೆಗೆ ಮೊದಲು ನಡೆಯವ ಶಾಸ್ತ್ರಗಳಲ್ಲಿ ಕುಂಚಿಟಿಗ ಮತ್ತು ಗಂಗಟಿಕಾರರಲ್ಲಿ ಕೆಲವು ಸಾಮ್ಯಗಳಿವೆ. ಕೆಲವು ಶಾಸ್ತಗಳು ಬೇರೆ ಬೇರೆ ರೀತಿಯಲ್ಲಿ ಆಚರಣೆಗೊಳ್ಳುತ್ತವೆ. ಹೆಣ್ಣು ನೋಡುವುದು, ವೀಳ್ಯ ಶಾಸ್ತ್ರ, ಅರಿಶಿಣ ಶಾಸ್ತ್ರ, ಬಳೆ ಶಾಸ್ತ್ರ, ಧಾರೆ ಶಾಸ್ತ್ರ, ಅರುಂಧತಿಯನ್ನು ತೋರಿಸುವ ಶಾಸ್ತ್ರ, ತೆರ ಕಟ್ಟುವುದು. ಬಾಗಿಲು ತಡಿಯೂ ಶಾಸ್ತ-ಪ್ರಸ್ತದ ಶಾಸ್ತ್ರಗಳು ಕುಂಚಿಟಿಗ, ಗಂಗಟಿಕಾರರಲ್ಲಿ ಸಾಮಾನ್ಯವಾಗಿ ಒಂದೇ ತೆರನಾಗಿ ನಡೆಯುತ್ತವೆ.

ಪ್ರಥಮ ಶಾಸ್ತ್ರಕ್ಕೆ ಮುನ್ನಾ ದಿನ ಚಪ್ಪರ ಕಂಬಕ್ಕೆ ಪೂಜಿಸುವುದು ಎರಡು ಕಡೆಯು ನಡೆಯತ್ತದೆ. ಅಡಿಗೆ ಮಾಡಲು ವಧುವಿನಿಂದ ಒಲೆಗೆ ಪೂಜಿಸುವರು. ಬಳೆ ಶಾಸ್ತ್ರವನ್ನು ಹೆಣ್ಣಿನವರು ಮಾಡುವಂತೆ, ಕ್ಷೌರಿಕ ಶಾಸ್ತ್ರವನ್ನು ಗಂಡಿನ ಕಡೆಯವರು ಮಾಡುತ್ತಾರೆ. ಎರಡು ಕಡೆಯವರು ಮನೆ ದೇವರುಗಳಿಗೆ ಪೊಜೆಸಲ್ಲಿಸುವರು. ನಾಗರು ಕಲ್ಲಿನ ಪೂಜೆ ಮಾಡುವುದು ಕಂಡು ಬರುತ್ತದೆ. ರಾತ್ರಿಯಲ್ಲಿ ಒಸಗೆಯ ಶಾಸ್ತಗಳು ನಡೆಯುತ್ತವೆ. ಹಾಗೆ ಅರಿಶಿಣ ಹಚ್ಚುವ, ಹಸೆ ಬರೆಯುವ, ನೆಲ್ಲು ಬೀರುವ, ವರ ಪೂಜೆ ಮಾಡಿ ಕಾಲು ತೊಳೆಯುವ ಶಾಸ್ತ್ರಗಳು ಎರಡು ಪಂಗಡಗಳಲ್ಲಿ ನಡೆಯತ್ತವೆ.

ಮುಹೂರ್ತದ ಸಂದರ್ಭ ತೆರೆ ಬಿಡುವ ಹಾರ ಹಾಕಿಸುವ, ಮಾಂಗಲ್ಯ ಮುಟ್ಟಿಸಿ ನಮಸ್ಕರಿಸುವ, ತಾಳಿಕಟ್ಟಲು ಅಪ್ಪಣೆ ಕೋರುವ, ಧಾರೆ ಎರೆಯುವ ಮುಂತಾದ ಶಾಸ್ತಗಳು ನಡೆಯುತ್ತವೆ. ನಂತರ ಸೂರ್ಯ, ಅರುಂಧತಿ ನಕ್ಷತ್ರ ತೊರಿಸುವ, ಅರತಕ್ಷತೆ ಹಾಕುವ, ಚೆಂಡಿನಾಟ, ಅಕ್ಷತೆಯನ್ನು ಅಚ್ಚೊತ್ತಿಸುವ, ಎಲೆ ಅಡಿಕೆ ಜಗಿದು ಎಂಜಲು ತಾಂಬೂಲತಿನ್ನಿಸುವ, ಆಸನ ಬದಲಾವಣೆ, ಹೆಸರು ಕೇಳುವ ಶಾಸ್ತಗಳು ಕುಂಚಿಟಿಗರಲ್ಲಿ ಕಂಡು ಬರುತ್ತಾವೆ.

ಅದೇರೀತಿ ಗಂಗಟಿಕಾರ ಒಕ್ಕಲಿಗರಲ್ಲೂ ಕುಂಚಿಟಿಗರ ಈ ಮೇಲಿನ ಶಾಸ್ತ್ರಗಳನ್ನೊಳಗೊಂಡಂತೆ ಕೆರೊಳ್ಳೆ ಶಾಸ್ತ್ರ, ಚೆಂಚಿಕಟ್ಟುವುದು, ಓಕಳಿಯಾಟ, ಸೀರುಡಿಕೆಗಳು ಮುಖ್ಯವಾಗಿ ಕಂಡು ಬರುತ್ತವೆ. ಇವು ಕುಂಚಿಟಿಗರಲ್ಲಿ ಕಂಡು ಬರುವುದಿಲ್ಲ.

**ಚಂಚಿ ಕಟ್ಟುವುದು:**

ಗಂಗಟಿಕಾರರಲ್ಲಿ ಮನೆಗೆ ಗಂಡು ಹೆಣ್ಣು ಬಂದ ನಂತರ "ಬುವ್ವ" ಶಾಸ್ತ್ರ ಮಾಡುತ್ತಾರೆ. ಬಾಳೆಹಣ್ಣು, ತುಪ್ಪ, ತಂಬಿಟ್ಟನ್ನು ಕಲಸಿ ಒಬ್ಬರಿಗೊಬ್ಬರು ತಿನ್ನಿಸುವ ಶಾಸ್ತ್ರವಾಗಿದೆ. ನಂತರ ಚಂಚಿ (ಸಂಚಿ) ಕಟ್ಟುವ ಶಾಸ್ತ್ರ. ಒಂದು ಕಟ್ಟು ಎಲೆ, ಪಾವು ಅಡಿಕೆ, ನಾಕಾಣೆ, ತಿಂಡಿ ತಿನಿಸುಗಳನ್ನು ಹಾಕಿ ಕಟ್ಟುವರು. ಅದನ್ನು ಗಂಡಿಗೆ ಕೊಡುವರು. ನಂತರ ಹೆಣ್ಣಿಗೆ ಮಡಿಲಕ್ಕಿ ಕಟ್ಟಿ ಗಂಡಿನ ಮನೆಗೆ ಕಳಿಸುವರು. ಆದರೆ ಕುಂಚಿಟಿಗರಲ್ಲಿ ಬುವ್ವ ಶಾಸ್ತ್ರವಿಲ್ಲ. ಜೊತೆಗೆ ಚಂಚಿ ಕಟ್ಟುವುದು "ಶೋಬನ" ವಾದ ಮೂರನೇ ದಿನ. ಹಿಂದಿನ ರಾತ್ರಿ ಪ್ರಸ್ತದ ಕೋಣೆಯಲ್ಲಿಟ್ಟಿದ ಹಣ್ಣು ಹಂಪಲುಗಳನ್ನು ಕಟ್ಟುವ ವಾಡಿಕೆ ಇದೆ. ಒಟ್ಟಾರೆ ಈ ಚಂಚಿ ಶಾಸ್ತ್ರವು ಎರಡು ಸಮುದಾಯಗಳಲ್ಲಿ ಭಿನ್ನ ಸಮಯದಲ್ಲಿ ನೆರವೇರಿಸುತ್ತಾರೆ.

**ಕೆರೊಳ್ಳೆ ಶಾಸ್ತ್ರ:**

ಗಂಗಟಿಕಾರರಲ್ಲಿ "ಕೆರೊಳ್ಳೆ ಶಾಸ್ತ್ರ" ದಲ್ಲಿ ಗಂಡು ಹೆಣ್ಣನ್ನು ವಾದ್ಯ ಸಮೇತ ಗಂಗಾಸ್ಥಳಕ್ಕೆ ಕರೆದುಕೊಂಡು ಹೋಗಿ ಪೂಜಿಸಿ ನಂತರ ಮೆರವಣಿಗೆ ಮೂಲಕ (ಹಗಲು ಮೆರವಣಿಗೆ) ಹರಳಿಕಟ್ಟೆ ಹತ್ತಿರ ಅರಳಿ ಬೇವು ಮರದಡಿ ಕೂರಿಸಿ ಮಣೆ, ಕಳಸ ಮುಂತಾದ ಸಾಮಾಗ್ರಿಗಳನ್ನಿಡುವರು. ನಂತರ ಗಂಡಿನಿಂದ ಹೆಣ್ಣಿನ ಕೈಯಲ್ಲಿರುವ ಕಂಕಣವನ್ನು, ಹೆಣ್ಣಿನಿಂದ ಗಂಡಿನ ಕಂಕಣವನ್ನು ಬಿಚ್ಚಿಸುವರು. ನಂತರ ಮುತ್ತೈದೆಯರು ಸೇಸೆ ಹಾಕಿ, ವೀಳ್ಯವನ್ನು ಕೊಡುವರು. ಗಂಡಿನಿಂದ ಹೆಣ್ಣಿನ ಹೆಸರನ್ನು, ಹೆಣ್ಣಿನಿಂದ ಗಂಡಿನ ಹೆಸರನ್ನು ಕೇಳಿಸುತ್ತಾರೆ. ಹಾಗಾಗಿ ಈ "ಕೆರೋಳ್ಳೆ ಶಾಸ್ತ್ರವು" ಗಂಗಟಿಗಾರರಲ್ಲಿ ಒಂದು ವಿಶಿಷ್ಠ ಆಚರಣೆಯಾಗಿದೆ. ಇದು ಕುಂಚಿಟಿಗರಲ್ಲಿ ಕಂಡು ಬರುವುದಿಲ್ಲ, ಗಂಗಾ ಪೂಜೆಯು ಎರಡೂ ಸಮುದಾಯಗಳಲ್ಲಿ ನಡೆವ ಶಾಸ್ತ್ರವಾಗಿವೆ. ಆದರೆ ಕುಂಚಿಟಿಗರಲ್ಲಿ ಗಂಡಿನ ಮನೆಗೆ ವಧುವರರು ಬಂದ ದಿನ ಈ ಕಾರ್ಯಕ್ರಮ ನಡೆಯುವುದು. ಉಳಿದಂತೆ ಮೇಲೆ ತಿಳಿಸಿದ ಬೇಕಾದ ಶಾಸ್ತ್ರವೂ ಕುಂಚಿಟಿಗರಲ್ಲಿ ನಡೆಯುವುದಿಲ್ಲ.

**ಓಕಳಿಯಾಟದ ಶಾಸ್ತ್ರ :**

ಗಂಗಟಿಕಾರರಲ್ಲಿ ಈ ಓಕಳಿಯಾಟದ ಶಾಸ್ತ್ರವು ನಡೆಯುತ್ತದೆ. ದೇವಸ್ಥಾನದಲ್ಲಿ ತಯಾರಿಸಿದ ಹೂವಿನ ಚೆಂಡನ್ನು ಆರಿಶಿಣದ ನೀರಿನಲಿಲ ಅದ್ದಿ ಎಸೆದಾಡಿ ಸಂಭ್ರಮಿಸುವರು. ಕುಂಚಿಟಿಗರಲ್ಲಿ ಮುಹೂರ್ತ ಮುಗಿದ ಮಾರನೇ ದಿನ ಗಂಡಿನ ಊರಿಗೆ ಬಂದಾಗ ದೇವಸ್ಥಾನದ ಮುಂದೆ "ಕೂರಿಸುವ ಶಾಸ್ತ್ರ"ದ ಸಮಯದಲ್ಲಿ ಹೂವಿನಿಂದ / ಬಾಳೆ ಎಲೆಯಿಂದ ಚಂಡನ್ನು ತಯಾರಿಸಿ ಅವಕ್ಕೆ ಬಣ್ಣದ ಕಾಗದ ಸುತ್ತಿ ಚೆಂಡನ್ನು ತಯಾರಿಸಿ ಆಟವಾಡಿಸುವರು. ಗಂಡು ಹೆಣ್ಣಿನ ಕಡೆಯವರು ತಮ್ಮ ತಮ್ಮ ಪಕ್ಷದವರ ಕಡೆ ಪರವಹಿಸಿ ಸಂಭ್ರಮಿಸುತ್ತಾರೆ.

**ಸೀರುಡಿಕೆ (ಕೂಡಿಕೆ):**

ಕುಂಚಿಟಿಗರ ಕಾಣದ ಬಹು ವಿಶಿಷ್ಟವಾದ ಶಾಸ್ತ್ರವು ಸೀರುಡಿಕೆ. ಇದು ಮಾನವೀಯ ಮೌಲ್ಯವನ್ನು ಎತ್ತಿ ಹಿಡಿಯುವ ಆಚರಣೆ. ಹರೆಯದಲ್ಲಿಯೇ ಕಾರಣಾಂತರದಿಂದ ಗಂಡನನ್ನು ಕಳೆದುಕೊಂಡ ಹೆಣ್ಣಿಗೆ ಮರು ವಿವಾಹ ಮಾಡುವ ಪದ್ಧತಿಯಾಗಿದೆ. ಸಾಮಾನ್ಯವಾಗಿ ಯಾವ ಸಮುದಾಯದಲ್ಲೂ ಕಾಣದ ಈ "ವಿಧವಾ ವಿವಾಹ ಪದ್ಧತಿ" ಗಂಗಟಿಕಾರರಲ್ಲಿ ಕಾಣುತ್ತೇವೆ. ಗಂಗಟಿಕಾರರಲ್ಲಿ ಹೆಣ್ಣಿನ ಬಗ್ಗೆ ಇರುವ ಗೌರವವನ್ನು ಈ ಪದ್ಧತಿ ಎತ್ತಿ ತೋರಿಸುತ್ತದೆ. ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ಜೀವನಪರ್ಯಂತ ನರಳುವ ಬದಲು ಆಕೆ ಮತ್ತೊಮ್ಮೆ ದಾಂಪತ್ಯ ಜೀವನ ಅನುಭವಿಸುವ ಈ ಪದ್ಧತಿಯು ನಿಜವಾಗಿಯು ಉತ್ತಮವಾದದ್ದು.

ಹಾಗೆ ಕುಂಚಿಟಿಗರಲ್ಲಿರುವ, ಗಂಗಟಿಗಾರರಲ್ಲಿ ಇಲ್ಲದ ಇನ್ನು ಒಂಭತ್ತು ಶಾಸ್ತ್ರಗಳನ್ನು ಕಾಣಬಹುದು. ನೆರೆಹೂಡುವ ಶಾಸ್ತ್ರ (ಗಂಡು ಬೀಡು ಬಿಡುವಿಕೆ)ಕ್ಕೆ ಸಂಬಂಧಪಟ್ಟಂತೆ ರಾತ್ರಿಯಲ್ಲಿ ಶಾಸ್ತ್ರಗಳು ಮುಗಿದ ಮೇಲೆ ಗಂಡು ಮತ್ತು ಪರಿವಾರದವರನ್ನು ಕೋಳಿಕೂಗುವ ಹೊತ್ತಿಗೆ ಗಂಡಿನ ಕುಲವಂದಿಗರ ಮನೆಗೆ ಬಿಡುವ ಪದ್ಧತಿಯಾಗಿದೆ. ಅವರು ಅಲ್ಲಿಯೇ ಬೆಳಿಗ್ಗೆ ನಿತ್ಯ ಕರ್ಮ ಮುಗಿಸಿ ಸ್ನಾನ ವಂಧ್ಯಾದಿಗಳನ್ನು ಮಾಡಿ, ಮದುವೆ ಮನೆಯಿಂದ ತಂದ ಉಪಹಾರವನ್ನು ಸೇವಿಸುತ್ತಾರೆ. ನಂತರ ಧಾರೆಗೆ ಸಿದ್ಧವಾಗಿ ಮಂಟಪಕ್ಕೆ ಕರೆ ತರುವ ವಾಡಿಕೆ ಇದೆ. ಪ್ರಸುತ್ತ ಕಲ್ಯಾಣ ಮಂಟಪಗಳಲ್ಲಿ ಮದುವೆಗಳು ನಡೆಯುವುದರಿಂದ ಈ ಶಾಸ್ತ್ರಗಳು ಕಡಿಮೆಯಾಗಿವೆ. ಈಗಲು ಹಳ್ಳಿಗಳಲ್ಲಿ ಗಂಗಟಿಕಾರರು ಈ ಪದ್ಧತಿಯನ್ನು ತಪ್ಪದೆ ಅನುಸರಿಸುತ್ತಾರೆ.

ಕುಂಚಿಟಿಗರಲ್ಲಿ "ಮನೆ ದುಂಬಿಸುವ" ಶಾಸ್ತ್ರವು ನಡೆಯುತ್ತದೆ. ಗಂಡು ಹೆಣ್ಣುಗಳು ಗಂಡಿನ ಮನೆಗೆ ಬಂದಾಗ ಈ ಶಾಸ್ತ್ರ ನಡೆಯುತ್ತದೆ. ಅಲ್ಲಿ ಬಲಗಾಲಿಡುವ ಶಾಸ್ತ್ರ, ತಣಿಗೆ ಶಾಸ್ತ್ರ, ಪಡಿ ಒದೆಯುವ ಶಾಸ್ತ್ರಗಳು ನಡೆಯುತ್ತವೆ. ಇವುಗಳನ್ನು ಗಂಡಿನ ಅಕ್ಕ ತಂಗಿಯರು, ಸೋದರತ್ತೆಯರು ಈ ಶಾಸ್ತ್ರ ಮಾಡುತ್ತಾರೆ. ಸೋದರತ್ತೆಯು ತನ್ನ ಸೋದರಳಿಯನ ಕಾಲು ಹಿಡಿದು ತಡೆಯುತ್ತಾರೆ. ಆಗ ಗಂಡು ಆಕೆಗೆ ಮುಂದಿನ ದಿನಗಳಲ್ಲಿ ಏನಾದರು ದಾನ ಮಾಡುವೆನೆಂದು ಮಾತುಕೊಡುವನು. ತನ್ನ ಶಕ್ತ್ಯಾನುಸಾರ ಬಂಗಾರದ ಒಡವೆಯನ್ನೋ, ಒಂದು ಹಸುವಿನ ಕರುವನ್ನೋ ನೀಡಿ ತನಗಂಟುವ ದೋಷವನ್ನು ಬಿಡಿಸಿಕೊಳ್ಳುತ್ತಾನೆ. ಆದರೆ ಈ ಶಾಸ್ತ್ರವು ಗಂಗಟಿಕಾರರಲ್ಲಿ ಕಂಡು ಬರುವುದಿಲ್ಲ. ಬದಲಾಗಿ ತಾನು ಮದುವೆಯಾದ ಹೆಣ್ಣನ್ನು ತನ್ನವಳ್ನಾಗಿ ಮಾಡಿಕೊಳ್ಳಲು "ನಿನ್ನ ಬುದ್ದಿ ಬಿಟ್ಟು ನನ್ನ ಬುದ್ದಿ ಕಲಿ" [1] ಎಂದು ಸೋದರತ್ತೆಯು ತನ್ನ ಮಗಳಾಗಿಸಿಕೊಳ್ಳುವ ಮಾನವೀಯತೆಯ ಅತ್ತೆ ಶಾಸ್ತ್ರ ನಡೆಯುವುದು.

ಹೀಗೆ ಕುಂಚಿಟಿಗ ಮತ್ತು ಗಂಗಟಿಕಾರರಲ್ಲಿ ನಡೆಯುವ ಮದುವೆ ಶಾಸ್ತ್ರಗಳನ್ನು ವೈಶಿಷ್ಟ್ಯ ಪೂರ್ಣವಾಗಿ ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು. ಹಾಗೆ ಈ ಎರಡು ಪಂಗಡಗಳ ಸಂಪ್ರದಾಯಗಳಲ್ಲಿ ಸಾಕಷ್ಟು ಸಾಮ್ಯತೆಗಳನ್ನು ಕಾಣಬಹುದು. ಅದರಲ್ಲೂ ವಿಶೇಷವಾಗಿ ಸೀರುಡಿಕೆ (ಕೂಡಿಕೆ) ಪದ್ಧತಿಯು ಯಾವ ಜನಾಂಗ, ಸಮುದಾಯದಲ್ಲಿಯೂ ಕಾಣದಂತ ಒಂದು ವಿಶಿಷ್ಟ ಪದ್ಧತಿಯಾಗಿದೆ. ಈ ಎರಡೂ ಸಮುದಾಯಗಳ ಆಚರಣೆಗಳಲ್ಲಿ ವೈಧಿಕ ಸಂಪ್ರದಾಯವು ಅಲ್ಲಲ್ಲಿ ಪ್ರಭಾವ ಬೀರುವುದು ಎದ್ದು ಕಾಣುತ್ತದೆ.

ಹಾಗೆಯೇ ಒಕ್ಕಲಿಗರ ಒಳ ಪಂಗಡಗಳಲ್ಲಿ ಪ್ರಮುಖವಾದ ನೊಣಬ ಮತ್ತು ಉಪ್ಪಿನ ಕೊಳಗ ಒಕ್ಕಲಿಗರಲ್ಲಿಯೂ ನಡೆವ ಸಂಪ್ರದಾಯ ಆಚರಣೆಗಳಿಗೂ ಕುಂಚಿಟಿಗರ ಆಚರಣೆಗಳಿಗೂ ಭಿನ್ನತೆಯನ್ನು ಕಾಣಬಹುದು.

ಕುಂಚಿಟಿಗರಲ್ಲಿ ಕಂಕಣವನ್ನು ಕಟ್ಟಲು ಕುರಿ ಉಣ್ಣೆಯ ದಾರ ಬಳಸುವರು. ಇದು ನೊಣಬ ಒಕ್ಕಲಿಗರಲ್ಲಿ ಕಂಡುಬರುವುದಿಲ್ಲ. ಕುಂಚಿಟಿಗರಲ್ಲಿ ಗಂಡನ್ನು ಹೆಣ್ಣಿನ ಮನೆಗೆ ಕರೆದುಕೊಂಡು ಹೋಗಿ ಮುಹೂರ್ತ ಮಾಡುವರು. ಆದರೆ ನೊಣಬರಲ್ಲಿ ಗಂಡಿನ ಮನೆಗೆ ನಾಲ್ಕು ದಿನದ ಪಂಗಡದವರು ಹೆಣ್ಣನ್ನು ಕರೆದುಕೊಂಡು ಹೋಗಿ ಮುಹೂರ್ತ ಮಾಡುತ್ತಾರೆ. ಕುಂಚಿಟಿಗರಲ್ಲಿ ಮುಹೂರ್ತದ ದಿನ ರಾತ್ರಿ ಹೊಸ್ತಿಲನ್ನು ಹೆಣ್ಣಿನಿಂದ ದಾಟಿಸಿದರೆ, ನೊಣಬರಲ್ಲಿ ಪ್ರಥಮ ಶಾಸ್ತ್ರದ ದಿನವೇ ಗಂಡಿನ ಮನೆಯ ಹೊಸ್ತಿಲನ್ನು ದಾಟಿಸುವರು, ಹಾಗೆ ಕುಂಚಿಟಿಗರಲ್ಲಿ ಮಾಂಗಲ್ಯವನ್ನು ಗಂಡು ಹೆಣ್ಣಿನ ಕೊರಳಿಗೆ ಕಟ್ಟಿದರೆ. ನೊಣಬರಲ್ಲಿ ಸೋದರ ಮಾವನಿಂದ ಮಾಂಗಲ್ಯ ಪಡೆದು ಹೆಣ್ಣು ತನ್ನ ಕೊರಳಿಗೆ ತಾನೇ ಕಟ್ಟಿಕೊಳ್ಳುವಳು.

ನೊಣಬರಲ್ಲಿ ಮತ್ತೊಂದು ವಿಶಿಷ್ಟ ಸಂಪ್ರದಾಯವಿದೆ. ಮುಹೂರ್ತದ ದಿನ ತಮ್ಮ ಜಮೀನಿನಲ್ಲಿ ಗುಳಿಯನ್ನು ತೋಡಿಸಿ ಬಾಳೆ ಎಲೆ ಹಾಸಿ, ಅನ್ನ ಎಳ್ಳೆಣ್ಣೆಯನ್ನು ಹಾಕಿ, ನೇಗಿಲ ಮೇಣಿಯನ್ನು ಇಟ್ಟು ಮಣ್ಣು ಮುಚ್ಚುವರು. ಮದುವೆ ಮುಗಿದ ಒಂಭತ್ತು ತಿಂಗಳನಂತರ ಮೇಣಿಯನ್ನು ಹೊರತೆಗೆಸುತ್ತಾರೆ. ಆ ಸಮಯದಲ್ಲಿ ತೆಗೆಯುವವನನ್ನು ಬಿಟ್ಟು ಉಳಿದವರಾರೂ ನೋಡುವಂತಿಲ್ಲ. ಒಂದು ವೇಳೆ ನೋಡಿದರೆ ಕೇಡಾಗುವುದೆಂಬ ನಂಬಿಕೆ ಇದೆ. ಈ ಒಂದು ಪದ್ಧತಿ ಕುಂಚಿಟಿಗರಲ್ಲಿ ಕಂಡು ಬರುವುದಿಲ್ಲ.

ಇದೆ ನೊಣಬ ಒಕ್ಕಲಿಗರಲ್ಲಿ ಮೂರು ದಿನದ ಪಂಗಡದವರು ಪ್ರಥಮ ಶಾಸ್ತ್ರದ ದಿನ ಕುಂಬಾರರ ಮನೆಗೆ ಹೋಗಿ ಮೂರು ಹರವಿ ಮತ್ತು ಚಿಕ್ಕ ಮೂರು ಹೂಜಿ (ಕುಡಿಕೆ) ತರುವರು. ನೊಣಬರ ನಾಲ್ಕು ದಿನದ ಪಂಗಡದವರಲ್ಲಿ ನಾಲ್ಕು ಹರವಿ, ನಾಲ್ಕು ಕುಡಿಕೆ ತರುವ ಸಂಪ್ರದಾಯವಿದೆ. ಹಾಗೆ ಕುಂಚಿಟಿಗರು ಪಥ್ರಮ ಶಾಸ್ತ್ರದ ದಿನ ಮನೆದೇವರಿಗೆ ಪೂಜೆ ಮಾಡಿಸಿ ತೀರ್ಥವನ್ನು ಚಿಮುಕಿಸುವರು. ಆದರೆ ನೊಣಬರ ಮೂರು ದಿನದ ಪಂಗಡದವರಲ್ಲಿ ಮನೆದೇವರುಗಳಿಗಲ್ಲದೆ, ಮಾಸ್ತಮ್ಮ (ಮಹಾಸತಿ) ನಿಗೆ ಕೆಲವರು, ಕೊಂಡದ ಕೆಂಪಮ್ಮನಿಗೆ ಕೆಲವರು, ಮಣ್ಣಮ್ಮನಿಗೆ ಕೆಲವರು ಪೂಜೆಸಲ್ಲಿಸಿ ಮದುವೆ ಶಾಸ್ತ್ರಗಳನ್ನು ಪ್ರಾರಂಭಿಸುವರು. ಅದೇ ನೋಣಬರ ನಾಲ್ಕು ದಿನದ ಪಂಗಡದವರು ತಮ್ಮ ಮನೆ ದೇವರನ್ನು ಮನೆಗೆ ಕರೆದು ಪೂಜೆ ಸಲ್ಲಿಸುವರುದ.

ಇನ್ನೂ ಉಪ್ಪಿನ ಕೊಳಗ ಒಕ್ಕಲಿಗರ ಮತ್ತು ಕುಂಚಿಟಿಗ ಒಕ್ಕಲಿಗರ ಮದುವೆಯ ಶಾಸ್ತ್ರಗಳಲ್ಲಿ ಸಾಕಷ್ಟು ಸಾಮ್ಯತೆಗಳನ್ನು ಕಾಣಬಹುದು. ಆದರೆ ಬಹು ಮುಖ್ಯವಾದ ಭಿನ್ನತೆ ಎಂದರೆ ಉಪ್ಪಿನ ಕೊಳಗ ಒಕ್ಕಲಿಗರಲ್ಲಿ ಗಂಡಿನ ಮನೆಯಲ್ಲಿಯೇ ಮದುವೆ ಕಾರ್ಯ ನಡೆಯುತ್ತದೆ. ಐದು ದಿನಗಳ ಕಾಲ ನಡೆಯುವ ಮದುವೆಗೆ ಬಂಧು ಬಳಗದವರೆಲ್ಲ ಐದು ದಿನವೂ ಗಂಡಿನ ಮನೆಯಲ್ಲಿಯೇ ಉಳಿದು ಕೊಳ್ಳುವರು. ಪ್ರಥಮ ಶಾಸ್ತ್ರದ ದಿನ ಬೆಳಿಗೆ ಗಂಡಿನ ಕಡೆಯ ಒಂದಿಬ್ಬರು ಹೆಣ್ಣನ್ನು ಅಹ್ವಾನಿಸಲು ಬರುವರು. ಬರುವಾಗ ಗಾಡಿಯಲ್ಲಿ ಹದಿನಾರು ಸೇರು ಅಕ್ಕಿ, ಐದು ಅಚ್ಚು ಬೆಲ್ಲ, ಐದು ಕಟ್ಟು ವೀಳ್ಯದೆಲೆ, ಒಂದು ಸೇರು ಅಡಿಕೆ, ಅರಿಶಿಣ ಕುಂಕುಮ, ಹೂವು, ಹಣ್ಣು ಕಾಯಿ ಮುಂತಾದವನ್ನು ತಂದು

ಹೆಣ್ಣಿನ ಮನೆಯವರಿಗೆ ಕೊಡುವರು. ಇದನ್ನು "ದೇವರೂಟದ ಸಾಮಾನು" ಎಂದು ಕರೆಯುವರು. ತಂದ ದಾನ್ಯವನ್ನು ಬಳಸಿ ಹೆಣ್ಣಿನ ಕಡೆಯವರು ಅಡುಗೆ ಸಿದ್ಧ ಪಡಿಸಿ, ದಾಸಯ್ಯನನ್ನು ಕರೆದು ಮದುವೆಗೆ ಹೊರಟಿರುವ ಜನರನ್ನು ಕರೆದು ಊಟ ಬಡಿಸಿ ಗೋವಿಂದ ಎನ್ನಿಸಿ ದಾಸಯ್ಯ ಪಂಕ್ತಿಯನ್ನು ಎಬ್ಬಿಸುತ್ತಾರೆ. ನಂತರ ಅಲಂಕಾರಗೊಂಡ ಎತ್ತಿನ ಗಾಡಿಗಳಲ್ಲಿ ವಧು ಸಮೇತ ಬಂಧು ಬಳಗದವರೆಲ್ಲ ಗಂಡಿನ ಮನೆಗೆ ತೆರಳುವರು. ಅಲ್ಲಿಯೇ ಮುಹೂರ್ತ ಮಾಡಿ ಮದುವೆ ಕಾರ್ಯವನ್ನು ಮುಗಿಸುವರು.

ಒಟ್ಟಾರೆ ಒಕ್ಕಲಿಗರ ಒಳ ಪಂಗಡಗಳಾದ ಕುಂಚಿಟಿಗ, ಗಂಗಟಿಕಾರರ, ನೊಣಬ, ಉಪ್ಪಿನ ಕೊಳಗ ಒಕ್ಕಲಿಗರ ಮದುವೆ ಆಚರಣೆಗಳು ಬಹುತೇಕ ಸಾಮ್ಯತೆಯನ್ನು ಹೊಂದಿರುತ್ತವೆ. ಕೆಲವೊಂದು ಭಿನ್ನತೆಗಳನ್ನು ಆಯಾ ಪಂಗಡಗಳು ಅನುಸರಿಸಿಕೊಂಡು ಅಂದಿನಿಂದ ಇಂದಿನವರೆಗೂ ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಮೆರೆಸುತ್ತಾ ಉಳಿಸಿಕೊಂಡು ಬಂದಿವೆ ಎಂದರೆ ತಪ್ಪಾಗಲಾರದು.

---

1. ಕುಂಚಿಟಿಗರ ಇತಿಹಾಸ ಮತ್ತು ಸಂಸ್ಕೃತಿ ದರ್ಶನ - ಡಾ. ವಿ. ಆಂಜಿನಪ್ಪ ಮತ್ತು
2. ಕುಂಚಿಟಿಗರ ಮದುವೆ ಸಂಪ್ರದಾಯಗಳು - ಲೇ. ಹೆಚ್.ಬಿ. ಶಿವಕುಮಾರ್ ಪು.ಸಂ.68

# ಅಧ್ಯಾಯ - 8

## ಸಮಾರೋಪ

ಒಟ್ಟಾರೆ ಆದಿ ಮಾನವನಿಂದ ಹಿಡಿದು ಇಂದಿನ ಅತ್ಯಾಧುನಿಕ ರಾಕೆಟ್ ಯುಗದ ನಾಗರೀಕ ಮಾನವನವರೆಗೂ ನಿರಂತರವಾದ ಜೀವನ ಪ್ರವಾಹವು ಹರಿದು ಬದಲಾವಣೆಗೊಂಡು ಹೊಸ ಹೊಸ ಸಂಸ್ಕೃತಿಗಳು ರೂಪಗೊಂಡು ಕಾಲಾಂತರದಲ್ಲಿ ನಶಿಸಿಹೋಗಿವೆ. ಮಾನವನು ತನ್ನ ಸಾಮಾಜಿಕ ಬದುಕಿಗೆ ಸಂಬಂಧಪಟ್ಟಂತೆ ಆತನೇ ರೂಪಿಸಿಕೊಂಡ ಸಾಮಾಜಿಕ ಸಂಸ್ಥೆಗಳು ರೂಪತಳೆದವು. ಅಂತಹವುಗಳಲ್ಲಿ "ವಿವಾಹವೂ" ಒಂದು. ಆಯಾ ಜನಾಂಗದ ಸಾಂಸ್ಕೃತಿಕ ಅನನ್ಯತೆಯನ್ನು ಸುಚಿಸುವಂತಹದು. ಮನುಷ್ಯನು ಸಂಘ ಜೀವಿಯಾಗಿ ಬದುಕಲು ಕಂಡುಕೊಂಡಂತೆ ಗಂಡು ಹೆಣ್ಣುಗಳು ಸಾಂಗತ್ಯ ಜೀವನ ನಡೆಸಿ ಬದುಕನ್ನು ನಡೆಸಲು ವಿವಾಹವೆನ್ನುವ ಸಾಮಾಜಿಕ ಸಂಸ್ಥೆಯು ರೂಪ ತಳೆಯಿತು. ಅದರ ಜೊತೆ ಜೊತೆಗೆ ಸಂಪ್ರದಾಯ, ಆಚರಣೆಗಳು ನಂಬಿಕೆಗಳು ಹುಟ್ಟಿಕೊಂಡು ಆಯಾ ಸಾಂಸ್ಕೃತಿಯ ಅನನ್ಯತೆಯನ್ನು ಸಾರುತ್ತವೆ. ಹಾಗಾಗಿ ನಿರ್ಧಿಷ್ಟ ಜನಾಂಗದ ನಂಬಿಕೆ, ಆಚರಣೆಗಳು, ಸಂಪ್ರದಾಯಗಳನ್ನು ಅಧ್ಯಯನ ಮಾಡುವ ಮೂಲಕ ಸಮಾಜ ಸಂಸ್ಕೃತಿಗೆ ಆ ಜನಾಂಗವು ನೀಡಿರುವ ಕೊಡುಗೆಗಳೇನು ಎಂಬುದನ್ನು ತಿಳಿಸಲು ಸಾಧ್ಯವಾಗುತ್ತದೆ. ಹಾಗೆಯೇ ಪಾಶ್ಚಾತ್ಯರ ಪ್ರಭಾವಕ್ಕೆ ಒಳಗಾಗಿ, ಜಾಗತೀಕರಣದ ಹೊಸ್ತಿಲಲ್ಲಿರುವ ಇಂದಿನ ಬದಲಾವಣೆಯ ಸಮಯದಲ್ಲಿ ಆಯಾ ಜನಾಂಗದ ವಿಶಿಷ್ಟತೆ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಗುರ್ತಿಸುವ ಕೆಲಸವೇ ಈ ಅಧ್ಯಯನದ ಉದ್ದೇಶವಾಗಿದೆ.

ಭಾರತವು ಬಹು ಜನಾಂಗೀಯ, ಬಹು ಸಂಸ್ಕೃತಿಗಳಿಂದ ಕೂಡಿದ ರಾಷ್ಟ್ರ. ಇಲ್ಲಿನ ಸಾಂಸ್ಕೈತಿಕ ಪರಂಪರೆಗಳು ಆಯಾ ಜನಾಂಗದಲ್ಲಿ ಅಪ್ರಜ್ಞಾಪೂರ್ವಕ ಸ್ಥಿತಿಯಲ್ಲಿ ಸುರಕ್ಷಿತಗೊಂಡು ಪ್ರವಹಿತವಾಗಿವೆ. ಹಾಗಾಗಿ ಈ ಭಾರತೀಯ ಪರಂಪರೆಯಲ್ಲಿಯಾವುದೇ ಒಂದು ಅಂಗ ಊನವಾದರೂ. ಅದನ್ನು ಕಾಪಾಡಿಕೊಳ್ಳಲು ಉತ್ಸುಕ ಜನಸಮುದಾಯ ಮುತುವರ್ಜಿಯಿಂದ ಸರಿಪಡಿಸಲು ಸದಾ ಸಿದ್ಧವಾಗಿರುತ್ತದೆ. ಆದುದರಿಂದಲೆ ಸಮುದಾಯಗಳಲ್ಲಿರುವ ಸಾಂಸ್ಕೃತಿಕ ಆಚರಣೆಗಳು ಇಂದಿಗೂ ವ್ಯತ್ಯಾಸವಾಗದೆ ಜೀವಂತವಾಗಿ ಉಳಿದುಕೊಂಡು ಬಂದಿವೆ. ಈ ಆಚರಣೆಗಳಲ್ಲಿ ವೈಧಿಕ ಮತ್ತು ವೈದಿಕೇತರ ಪರಂಪರೆಗಳ ಸಮ್ಮಿಳಿರಗಳು ಕಂಡು ಬರುತ್ತವೆ. ಈ ಭಾರತೀಯ ಜನರು ಆಚರಿಸುವ ಹಬ್ಬ ಆರಿದಿನಗಳಲ್ಲಿ ಸೇರ್ಪಡೆಯಾಗಿರುವ ಪೌರಾಣಿಕ, ಐತಿಹಾಸಿಕ ಮತ್ತು ಶುದ್ಧ ಜಾನಪದ ನಂಬಿಕೆಗಳನ್ನು ಇನ್ನಿತರ ಜಾನಪದೀಯ ನೆಲೆಗಳನ್ನು ಆಧರಿಸಿದ ವಿವರಗಳು ಇದಕ್ಕೆ ಸ್ಪಷ್ಟ ನಿದರ್ಶನಗಳಾಗಿವೆ.

ಮಾನವನು ಜನ್ಮತಾಳಿದ ದಿನದಿಂದ ಇಂದಿನ ಆಧುನಿಕ ಮಾನವನವರೆಗೂ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ಪ್ರಕೃತಿಯ ಜೊತೆ ಜೊತೆಯಲ್ಲಿಯೇ ಉಳಿಸಿಕೊಂಡು, ರೂಢಿಸಿಕೊಂಡು ಬಂದಿದ್ದಾನೆ. ತಾನು ಭೌದ್ಧಿಕವಾಗಿ ಬೆಳೆದಂತೆ "ಸಂಸ್ಕೃತಿ" ಮತ್ತು ಸಮಾಜಗಳನ್ನು ರೂಢಿಸಿಕೊಂಡು ಇತರೆ ಜೀವಿಗಳಿಗಿಂತ ಭಿನ್ನವಾದ ಬದುಕನ್ನು ಕಂಡು ಕೊಂಡಿದ್ದಾನೆ. ತಮ್ಮದೇ ಆದ ವಿಶಿಷ್ಠ ಸಂಸ್ಕೃತಿಯನ್ನು ಕಟ್ಟಿಕೊಳ್ಳುವುದರ ಜೊತೆಗೆ ಇತರರೊಡನೆ ಕೂಡಿ ಬಾಳುವೆ ನಡೆಸುವ ಸಂಘ ಜೀವಿಯಾಗಿ ಬದುಕುವ ಸಮಾಜವೊಂದನ್ನು ರೂಪಿಸಿಕೊಂಡಿದ್ದಾನೆ. ಈತ ನಿರ್ಮಿಸಿಕೊಂಡ ಸಮಾಜವು ವೈವಿಧ್ಯಮಯವಾದ ವ್ಯವಸ್ಥೆಗಳಿಂದ  ಕೂಡಿದೆ. ಪ್ರಪಂಚದಾದ್ಯಂತ ಅನೇಕ ಬಗೆಯ ಸಾಮಾಜಿಕ ವ್ಯತ್ಯಾಸಗಳನ್ನು ಕಾಣಬಹುದು. ಒಂದು ಇನ್ನೊಂದಕ್ಕಿಂತ ಭಿನ್ನವಾಗಿದ್ದು, ತಮ್ಮದೇ ಆದ ವಿಶೇಷ ಗುಣಲಕ್ಷಣಗಳನ್ನು ಹೊಂದಿವೆ ಎಂದು ತಿಳಿಯಬಹುದು. ಹಾಗೆಯೇ ಸಮಾಜದಂತೆ ಸಮುದಾಯಗಳಲ್ಲು ವೈಶಿಷ್ಟ್ಯತೆಗಳಿಂದ ಕೂಡಿದ ಸಾಂಸ್ಕೃತಿಕ ವಿಶಿಷ್ಠ ಆಚರಣೆಗಳನ್ನು ಮಾನವನು ತಲೆಮಾರಿನಿಂದ ತಲೆಮಾರಿಗೆ, ಯಾವುದೇ ಆಧುನಿಕ ತೆಯ ಪ್ರಭಾವಕ್ಕೆ ಒಳಗಾಗದೆ ಅವುಗಳನ್ನು ಅನುಸರಿಸುತ್ತಾ ಬಂದಿದ್ದಾನೆ.

ಜಾತಿ ವ್ಯವಸ್ಥೆ ಎಂಬುದು ಭಾರತೀಯ ಸಮಾಜದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಭದ್ರವಾಗಿ ನೆಲೆಯೂರಿದೆ. ಇಂದೂ ಸಹ ಅದು ಇನ್ನಷ್ಟು ಪ್ರಭಲವಾಗಿ ಬೆಳೆದು ಹೆಮ್ಮರವಾಗಿರುವುದನ್ನು ಗಮನಿಸಬಹುದು. ಭಾರತದಲ್ಲಿ ಇಂದು ಒಂದೊಂದು ಗ್ರಾಮವು ಅಖಂಡ ಸಮಾಜವಾಗಿ ಬೆಳೆದು ಅದರಲ್ಲಿ ಹಲವಾರು, ಜಾತಿ, ಧರ್ಮಗಳು ಕಂಡುಬರುತ್ತವೆ. ಇವುಗಳು ತಮ್ಮದೇ ಅದ ಪ್ರತ್ಯೇಕ ಜೀವನ ಪದ್ದತಿಯನ್ನು ರೂಢಿಸಿಕೊಂಡು ಸಾಗುತ್ತಾ ಬಂದಿವೆ. ಈ ಹಿನ್ನೆಲೆಯಲ್ಲಿ ಹಲವು ಜಾತಿ. ಸಮುದಾಯಗಳು ಒಟ್ಟಿಗೇ ಬಂದುಕುವಾಗ ಸಮಾನ ಸಾಂಸ್ಕೃತಿಕ ಲಕ್ಷಣಗಳನ್ನು ಹೊಂದಿರುವಂತೆಯೇ, ಪ್ರತಿಯೊಂದು ಜಾತಿಯು ತನ್ನದೇ ಆದ ವಿಶಿಷ್ಟ ಸಾಂಸ್ಕೃತಿಕ ಮಹತ್ವವನ್ನು ಉಳಿಸಿಕೊಂಡು ಅನನ್ಯತೆಯನ್ನು ಮೆರೆದಿವೆ.

ಇಂದು ಎಷ್ಟೋ ಸಮುದಾಯಗಳು ಜಾಗತೀಕರಣದ ದಬ್ಬಾಳಿಕೆಗೆ ಒಳಗಾಗಿ ತಾವು ರೂಢಿಸಿಕೊಂಡು ಬಂದಿರುವ ಜೀವಂತ ಸಂಸ್ಕೃತಿಯನ್ನು ಕಳೆದುಕೊಳ್ಳುತ್ತಿವೆ. ಈ ದೃಷ್ಠಿಯಿಂದ ಇಂದು ಒಂದೊಂದು ಸಮುದಾಯವು ತಮ್ಮನ್ನು ಗುರ್ತಿಸಿಕೊಳ್ಳುವಿಕೆಗಾಗಿ (ಐಡೆಂಟಿಟಿಗೋಸ್ಕರ) ಚಳುವಳಿಗಳ ರೂಪವನ್ನು ಪಡೆದು ಸಾಮಾಜಿಕ ಸಂಚಲನವನ್ನುಂಟು ಮಾಡುತ್ತಿವೆ. ಈ ಹಿನ್ನಲೆಯಲ್ಲಿ ಕೆಲವು ಸಮುದಾಯಗಳು ತಮ್ಮ ಐಡೆಂಟಿಟಿಗೋಸ್ಕರ ಪರಿತಪಿಸುತ್ತಿದ್ದ. ಮತ್ತೆ ಕೆಲವು ಸಮುದಾಯಗಳು ಅಸ್ಮಿತೆಯ ಬಿಕ್ಕಟಿನಲ್ಲಿ ಸಿಲುಕಿ ನರಳುತ್ತಿವೆ. ಸಾಮಾಜಿಕವಾಗಿ ತಮ್ಮ ಸಮುದಾಯದ ಆಸ್ತಿತ್ವಕ್ಕೆ ದಕ್ಕೆ ಒದಗಿ ಅಂಚಿಗೆ ತಳ್ಳಲ್ಪಟ್ಟಿರುವುದರಿಂದ ಅವು ತಮ್ಮ ಪರಂಪರೆಯ ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಹೆಣಗಾಡುತ್ತಿವೆ. ಆದ್ದರಿಂದ ಇಂದಿನ ಆಧುನಿಕ ಸಮಾಜದ ಸಂಸ್ಕೃತಿಯನ್ನು ಸಂಪೂರ್ಣವಾಗಿ ಅರಗಿಸಿಕೊಳ್ಳಲಾಗದೆ, ತಮ್ಮ ಅತ್ತಿತ್ವವನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ಪರಿತಪಿಸುತ್ತಾ ಹೋರಾಟಕ್ಕೆ ಇಳಿದಿವೆ. ನಾಗರೀಕ ಸಮಾಜವೆಂದು ಕರೆಸಿಕೊಳ್ಳುತ್ತಿರುವ ಇಂದಿನ ನಗರ ಸಂಸ್ಕೃತಿಗಳು ಸಂಪೂರ್ಣವಾಗಿ ಜಾಗತೀಕರಣದ ಭರಾಟೆಯಲ್ಲಿ ತಮ್ಮ ಮೂಲ ನೆಲೆಯನ್ನು ಮರೆತು ಬಾಳ್ವೆ ಮಾಡುತ್ತಿರುವುದು ಕಂಡುಬರುತ್ತದೆ.

ಇಂದು ಕರ್ನಾಟಕದಲ್ಲಿ ಕನ್ನಡ ಜಾನಪದ ಅಧ್ಯಯನವು ಅಂತರ್ ಶಿಸ್ತೀಯ ಅಧ್ಯನಕ್ಕೆ ತನ್ನನ್ನು ತಾನು ತೆರೆದುಕೊಳ್ಳುತ್ತಿರುವುದು ಕುತೂಹಲಕರ ಸಂಗತಿಯಾಗಿದೆ. ಇದರ ಜೊತೆ ಜೊತೆಗೆ ಅಧ್ಯನದ ದೃಷ್ಟಿಯಿಂದ ಹಲವು ಅಯಾಮಗಳನ್ನು ಪಡೆದುಕೊಳ್ಳುತ್ತಿದೆ. ಜಾನಪದದಲ್ಲಿ ಪಾರಂಪರಿಕವಾದ ಕಲೆ, ಸಾಹಿತ್ಯ, ಸಂಗೀತ, ನಂಬಿಕೆ, ಆಚರಣೆ ಸಂಪ್ರದಾಯಗಳನ್ನು ವಿವಿಧ ಆಯಾಮಗಳಿಂದ ಅಧ್ಯಯನಕ್ಕೆ ಒಳಪಡಿಸುತ್ತಿರುವುದು ಇತ್ತೀಚಿಗೆ ಕಂಡು ಬರುತ್ತಿದೆ. ಇಂತಹ ಅಧ್ಯಯನಗಳಲ್ಲಿ ಸಾಮುದಾಯಿಕ ಅಧ್ಯಯನವು ಹೆಚ್ಚು ಮಹತ್ವ ಪಡೆಯುವುದರ ಮೂಲಕ ಆಯಾ ಜನಾಂಗಗಳಿನ ಸಂಸ್ಕೃತಿಯನ್ನು ಅನಾವರಣ ಮಾಡಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ತೆರೆಮರೆಗೆ ಸರಿದು, ಅಳಿವಿನ ಅಂಚಿನಲ್ಲಿರುವ ಜನಾಂಗಗಳ ಸಾಂಸ್ಕೃತಿಕ ಪರಂಪರೆಯ ವೈಶಿಷ್ಟ್ಯತೆಗಳನ್ನು ಸೂಕ್ಷ್ಮವಾಗಿ ಅರಿಯಲು ಅಧ್ಯಯನಗಳು ಮುಖ್ಯವಾಗುತ್ತವೆ.

ಪ್ರಪಂಚದಾದ್ಯಂತ ಅನೇಕ ಜನಸಮುದಾಯಗಳಿವೆ, ಹಾಗೆಯೇ ಭಾರತದಾದ್ಯಂತ ಭಿನ್ನ ಭಿನ್ನ ಜನ ಸಮುದಾಯಗಳು ಕಂಡುಬರುತ್ತವೆ. ಭಾರತೀಯರಲ್ಲಿರುವ ವಿಶಿಷ್ಟ ಸಂಸ್ಕೃತಿ, ಆಚಾರ ವಿಚಾರಗಳನ್ನು ಅರಿತರೆ ಅದು ಗೊತ್ತಾಗುತ್ತದೆ. ಆದುದರಿಂದ ಈಗಾಗಲೇ ಸಾಕಷ್ಟು ಜನಾಂಗಿಕ ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳನ್ನು ಅವಲೋಕಿಸಿದಾಗ ಜೀವಂತವಾಗಿರುವ ಸಂಸ್ಕೃತಿಯನ್ನು ಕಾಣಬಹುದು. ಒಟ್ಟಾರೆ ನಡೆದಿರುವ ಅಧ್ಯಯನಗಳನ್ನು ಗಮನಿಸುತ್ತಾ ಹೋದರೆ ಸಮುದಾಯದ ಮೇಲು ನೋಟದ ಅಂಶಗಳನ್ನು ಮಾತ್ರ ಶೋಧಿಸುವುದರಲ್ಲಿ ನಿಂತು ಬಿಟ್ಟಿವೆ ಎಂಬ ಅಂಶ ಗಮನಕ್ಕೆ ಬರುತ್ತದೆ. ಆದ್ದರಿಂದ ಇದೇ ವಿಚಾರಗಳನ್ನು ಇನ್ನಷ್ಟು ಆಳಕ್ಕೆ ಇಳಿದು ಒಂದು ಸಮುದಾಯದ ತಲಸ್ಪರ್ಶಿಯಾದ ಅಧ್ಯಯನ ನಡೆಸಿ ಒಂದೊಂದೇ ಪರಿಕಲ್ಪನೆಗಳನ್ನು ಪ್ರಧಾನವಾಗಿ ಇಟ್ಟುಕೊಂಡು ಅಧ್ಯಯನ ನಡೆಸಿದರೆ ಇದುವರೆಗೂ ಕಾಣದ ಮುಖ್ಯ ಅಂಶಗಳನ್ನು ಜಗತ್ತಿಗೆ ಪರಿಚಯಿಸಬಹುದೆಂಬ ಅಭಿಪ್ರಾಯವಾಗಿದೆ. ಇಡೀ ಒಂದು ಸಮುದಾಯದ ಬದುಕಿನ ರೀತಿ-ನೀತಿ, ಸಂಸ್ಕೃತಿಗಳನ್ನು ತಿಳಿಯಬೇಕಾದರೆ ಇದು ವರೆಗೂ ಅನುಸರಿಸಿಕೊಂಡು ಬಂದಿರುವ ಆಚಾರ-ವಿಚಾರ, ಸಂಪ್ರದಾಯ, ಆಚರಣೆ, ಭಾಷೆ ಪೂಜೆ ಪುನಸ್ಕಾರಗಳನ್ನು ಬಿಡಿ ಬಿಡಿಯಾಗಿ ಅಧ್ಯನಕ್ಕೊಳಪಡಿಸಬೇಕು. ಆಗ ಮಾತ್ರ ಆ ಸಮುದಾಯದ ಜೀವಂತ ಜನಪದ ಸಂಸ್ಕೃತಿಯನ್ನು ಅರಿತು ಅರ್ಥಮಾಡಿಕೊಳ್ಳಲು ಅನುಕೂಲವಾಗುತ್ತದೆ.

ಒಟ್ಟಾರೆಯಾಗಿ ಗಮನಿಸಬೇಕಾದ ಅಂಶವೆಂದರೆ ಭಾರತದ ಸಾವಿರಾರು ಜಾತಿಗಳಲ್ಲಿ ಒಂದಾಗಿರುವ ಒಕ್ಕಲಿಗ ಜನಾಂಗದ ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಈಗಾಗಲೇ ಎಷ್ಟೋ ವಿಶ್ವ ವಿದ್ಯಾಲಯಗಳು, ಹಾಗೂ ವೈಯಕ್ತಿಕವಾಗಿಯೂ ಕೆಲವು ಸಂಶೋಧಕರು ಅಧ್ಯಯನ ಮಾಡಿದ್ದಾರೆ. ಈ ದಿಸೆಯಲ್ಲಿ ಅಧ್ಯಯನಗಳು ಉತ್ತಮ ದಿಕ್ಕಿನೆಡೆಗೆ ಸಾಗುತ್ತಿರುವುದನ್ನು ಗಮನಿಸಬಹುದು. ಈ ಎಲ್ಲಾ ಅಧ್ಯಯನಗಳು ಬಹು ಪಾಲು ಎಂ.ಫಿಲ್, ಪಿ.ಹೆಚ್.ಡಿ, ಡಿ.ಲಿಟ್ ಪದವಿಯ ಸಂಶೋನೆಗಳಿಗಾಗಿ ಮಾಡಿರುವಂತವು. ಹಾಗೆಯೇ ಭಾರತೀಯ ಜಾತಿ,ಜನಾಂಗಗಳನ್ನು ಅಧ್ಯಯನಕ್ಕೆ ಒಳಪಡಿಸುವ ರೀತಿಯಲ್ಲಿ ಒಕ್ಕಲಿಗ ಜನಾಂಗ ಮತ್ತು ಅದರ ಒಳಪಂಗಡಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ. ಈ

ಹಿನ್ನಲೆಯಲ್ಲಿಯೇ ಒಕ್ಕಲಿಗರಲ್ಲಿ ಒಂದು ಪ್ರಭಲ ಒಳಪಂಗಡವಾದ "ಕುಂಚಿಟಿಗ" ಜನಾಂಗದಲ್ಲಿ ನಡೆಯುವ ಮದುವೆಯ ಸಂದರ್ಭದ ಆಚರಣೆಗಳು, ಸಂಪ್ರದಾಯಗಳ ವೈಶಿಷ್ಟತೆಯನ್ನು ಮತ್ತು ವೈವಿಧ್ಯತೆಗಳನ್ನು ಒಂದು ಶಿಷ್ಟ ಸಮಾಜಕ್ಕೆ ಪರಿಚಯ ಮಾಡಿಕೊಡುವ ಒಂದು ಸಣ್ಣ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

## ಪರಾಮರ್ಶನ ಗ್ರಂಥಗಳು


1. ಕುಂಚಿಟಿಗ ಜನಾಂಗ : ವಿ.ಡಿ.ವೀರಕ್ಯಾತಯ್ಯ ಮತ್ತು ಡಾ// ಜಿ. ತಿಮ್ಮಯ್ಯ ಅಖಿಲ ಕುಂಚಿಟಿಗರ ಮಹಾ ಮಂಡಲ ಬೆಂಗಳೂರು.
2. ಕುಂಚಿಟಿಗರ ಸಮಾಜ ಚರಿತ್ರೆ : ಎಂ.ಪುಟ್ಟಯ್ಯ ಅಖಿಲ ಕುಂಚಿಟಿಗರ ಮಹಾ ಮಂಡಲ ಬೆಂಗಳೂರು.
3. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ: ಎಂ. ಹೆಚ್. ನಾಗರಾಜು, 2003 ಅನಿಕೇತನ ಪ್ರಕಾಶನ ತುಮಕೂರು.
4. ಜಾನಪದ ಅಧ್ಯಯನ : ದೆ. ಜವರೇಗೌಡ, 1996, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಬೆಂಗಳೂರು.
5. ಗಂಗಡಿಕಾರ ಒಕ್ಕಲಿಗ : ಡಾ// ನಲ್ಲೂರು ಪ್ರಸಾದ್, 2001 ಅಪ್ರದೀನ ಪ್ರಕಾಶನ ಬೆಂಗಳೂರು.
6. ಒಕ್ಕಲಿಗರ ಇತಿಹಾಸ : ಡಾ// ಬಿ. ಪಾಂಡುಕುಮಾರ್, 2003 ವೇದಾವತಿ ಪ್ರಕಾಶನ ಬೆಂಗಳೂರು.
7. ಒಕ್ಕಲಿಗರ ಇತಿಹಾಸ ದರ್ಶನ : ನಂದಿ ವೆಂಕಟೇಶ ಮೂರ್ತಿ, 1988, ಪ್ರಸಾರಾಂಗ ಮೈಸೂರು ವಿ.ವಿ. ಮೈಸೂರು
8. ಒಕ್ಕಲಿಗರು ಮತ್ತು ಸಂಪ್ರದಾಯ: ದೊಡ್ಡಪ್ಪಗೌಡ, ಮಾಕೋನಹಳ್ಳಿ 1938 ನಭಶ್ರೀ ಪ್ರಕಾಶನ, ಮೈಸೂರು
9. ಮಾನವನ ವಿಕಾಸ : ಸಿದ್ದಲಿಂಗಯ್ಯ ಹೆಚ್.ಕೆ 1993, ಕರ್ನಾಟಕ ರಾಜ್ಯ ಒಕ್ಕಲಿಗರ ಮಹಾಸಂಘ ಬೆಂಗಳೂರು.
10. ಉಪ್ಪಿನ ಕೊಳಗ ಒಕ್ಕಲಿಗರು ಒಂದು ಸಾಂಸ್ಕೃತಿಕ ಅಧ್ಯಯನ : ಜಿ.ಎನ್. ಕೆಂಪಯ್ಯ 2010 ಗೋಧೂಳಿ ಪ್ರಕಾಶನ ಬೆಂಗಳೂರು.
11. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಡಾ// ಎಂ. ಚಿದಾನಂದ ಮೂರ್ತಿ 1929 ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು
12. ವಡ್ಡಗೆರೆ ವೀರನಾಗಮ್ಮನ ಚರಿತ್ರೆ: ಎನ್. ನಾರಾಯಣರಾವ್ 1968, ಮಧುಗಿರಿ
13. ಕುಂಚಿಟಿಗರ ಸಂದೇಶ (ಕೆಲವು ಮಾಸ ಪತ್ರಿಕೆಗಳು) : ಸಂಪಾದಕರು ಪ್ರೊ. ಮೂಲಿಮುದ್ದಣ್ಣ ಮತ್ತು ಶ್ರೀ ವೀರಕ್ಯಾತಯ್ಯ. ಕುಂಚಿಟಿಗರ ಮಹಾ ಮಂಡಲ ಬೆಂಗಳೂರು

14. ಭಾರತೀಯ ವಿವಾಹ ಸಂಸ್ಥೆಯ ಇತಿಹಾಸಃ ವಿ.ಕ. ರಾಜವಾಡೆ 1993, ನವಕರ್ನಾಟಕ ಪ್ರಕಾಶನ ಬೆಂಗಳೂರು
15. ಭಾರತೀಯ ಸಾಮಾಜಿಕ ಸಂಸ್ಥೆಗಳುಃ ಡಾ//ಎಂ. ನಂಜಮ್ಮಣ್ಣಿ
16. ನೊಣಬರ ಸಾಂಸ್ಕೃತಿಕ ಇತಿಹಾಸ : ಕೆಂಕೆರೆ ಹನುಮಂತೇಗೌಡರು ಗೋಧೂಳಿ ಪ್ರಕಾಶನ, ಬೆಂಗಳೂರು.
17. ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ : ಕೆಂಕೆರೆ ಹನುಮಂತೇಗೌಡರು ಗೋಧೂಳಿ ಪ್ರಕಾಶನ, ಬೆಂಗಳೂರು.
18. ಬೆಂಗಳೂರು ಕುಂಚಿಟಿಗರ : ಸಾರ್ವಜನಿಕ ವಿಧ್ಯಾರ್ಥಿ ನಿಲಯ ಪ್ರಟಿಸಿದ ಸಂಕ್ಷಿಪ್ತ ಇತಿಹಾಸ ಪುಸ್ತಕ ಬೆಂಗಳೂರು
19. ಕೆಲವು ಬಿಡಿ ಲೇಖನಗಳು : ಮೀರಾಸಾಬಿಹಳ್ಳಿ ಶಿವಣ್ಣ
20. ವಿವಿಧ ಸಂಚಿಕೆಯ ಲೇಖನಗಳು : ಎಂ. ವೀರಕ್ಯಾತಯ್ಯ, ಬೆಂಗಳೂರು
21. ವಿವಿಧ ಸಂಚಿಕೆಯ ಲೇಖನಗಳು : ಪ್ರೊ. ಹೆಚ್. ಜಿ. ಕೃಷ್ಣಪ್ಪ ಮೈಸೂರು
22. ಕನ್ನಡ ನಿಘಂಟು (ಸಂ.2) : ಕನ್ನಡ ಸಾಹಿತ್ಯ ಪರಿಷತ್ತ ಬೆಂಗಳೂರು
23. ವಿಜಯನಗರ ಕಾಲದ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಲೇ ಡಾ// ಕೆ. ರಮಾನಂದ ಕೀರ್ತನಶ್ರೀ ಪ್ರಕಾಶನ (2010) ಬೆಂಗಳೂರು-27
24. ದೊಡ್ಡಬಳ್ಳಾಪುರ ತಾ. ಕಾಡಲಪನ ಹಳ್ಳಿಯ ಶ್ರೀ ಕೆ.ಎಂ. ರಂಗಪ್ಪನವರು ತಿಳಿಸಿದ ಮೌಖಿಕ ವಿವರಗಳು
25. ಕುಂಚಿಟಿಗರ ಇತಿಹಾಸ ಮತ್ತು ಸಂಸ್ಕೃತಿ ದರ್ಶನ : ಲೇ ಡಾ// ವಿ. ಅಂಜನಪ್ಪ ಪ್ರಕಟಣೆ, ವಿಶ್ವಕುಂಚಿಟಿಗರ ಪರಿಷತ್ತು ನಂ.845, ತೆಂಗಿನ ತೋಟ ಬಡಾವಣೆ, ತುಮಕೂರು ರಸ್ತೆ, ದಾಸರಹಳ್ಳಿ, ಬೆಂಗಳೂರು-57.
26. ಮೊರಸು ಒಕ್ಕಲಿಗರ ಇತಿಹಾಸ : ಲೇ ಎಂ.ಹೆಚ್. ನಾಗರಾಜು ಗೋಧೂಳಿ ಪ್ರಕಾಶನ ಬೆಂಗಳೂರು
27. ಹೇಮಾವತಿ : ತುಮಕೂರು ಜಿಲ್ಲೆ, ಒಕ್ಕಲಿಗರ ಮಹಾನೆನಪಿನ ಸಂಚಿಕೆ- ಪಂ ಎಂ.ಹೆಚ್. ನಾಗರಾಜ್ ಒಕ್ಕಲಿಗರ ಸಂಘ ತುಮಕೂರು (1997)

# ಅನುಬಂಧ - 1

1. ಮದುವೆ ಸಂಪ್ರದಾಯದ ಕೆಲವು ಛಾಯ ಚಿತ್ರಗಳು
2. ಲಗ್ನ ಕಟ್ಟಿಸುವ ಮಾದರಿ ಪತ್ರಿಕೆ
3. ಮಾದರಿ ಲಗ್ನ ಪತ್ರಿಕೆ



ಶ್ರೀ ಆದಿತ್ಯಾದಿ ಗ್ರಹಾಸ್ಸರ್ವೇ ಸನಕ್ಷತ್ರಾಸ್ಸರಾಶಯಃ |
ಕುರ್ವಂತು ಮಂಗಳಂ ನಿತ್ಯಂ ಯಸ್ಯೇಷಾ ಲಗ್ನಪತ್ರಿಕಾ ||

**ಆರತಕ್ಷತೆ :**
22-05-2012ನೇ ಮಂಗಳವಾರ
ಸಂಜೆ 6.30 ರಿಂದ







**ಮುಹೂರ್ತ :**
23-05-2012ನೇ ಬುಧವಾರ
ಬೆಳಗ್ಗೆ 10.00 ರಿಂದ 10.43 ರ ವರೆಗೆ



**ಸ್ಥಳ : 'ಸಪ್ತಗಿರಿ ಕಲ್ಯಾಣ ಮಂಟಪ'**
ನೆಲಮಂಗಲ ರಸ್ತೆ, ದೊಡ್ಡಬಳ್ಳಾಪುರ.
ಬೆಂಗಳೂರು ಗ್ರಾ.ಜಿಲ್ಲೆ.

**ತಮ್ಮ ಸುಖಾಗಮನವನ್ನು ಬಯಸುವವರು :**

|| ಶ್ರೀ ವೆಂಕಟೇಶ್ವರ ಸ್ವಾಮಿ ಪ್ರಸನ್ನ ||  || ಶ್ರೀ ಕೋಡಿ ರಂಗನಾಥ ಸ್ವಾಮಿ ಪ್ರಸನ್ನ ||

**ಶ್ರೀಮತಿ ರತ್ನಮ್ಮ ಮತ್ತು ಶ್ರೀ ಬಿ.ಟಿ. ಶ್ರೀನಿವಾಸಯ್ಯ**
ಬರಗೂರು, ಸೊಂಪುರ ಹೋಬಳಿ, ನೆಲಮಂಗಲ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಮತ್ತು

**ಶ್ರೀಮತಿ ವೀರಮ್ಮ ಮತ್ತು ಶ್ರೀ ಕೆ.ಎಂ. ರಂಗಪ್ಪ**
ಕಾಡಲಪನಹಳ್ಳಿ, ಸಾಸಲು ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಇವರು ಮಾಡುವ ವಿಜ್ಞಾಪನೆಗಳು**

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀ ವಾಹನ ಶಕವರ್ಷ 1934ಕ್ಕೆ ಸರಿಯಾದ ಶ್ರೀ ನಂದನ ನಾಮ ಸಂವತ್ಸರ ದಿನಾಂಕ. 22-05-2012ನೇ ಮಂಗಳವಾರ ಪ್ರಥಮಶಾಸ್ತ್ರ ಹಾಗೂ ದೇವತಾಕಾರ್ಯ ಮತ್ತು ದಿನಾಂಕ. 23-05-2012ನೇ ಬುಧವಾರ ಈ ಶುಭದಿನ ಬೆಳಗ್ಗೆ 10-00 ರಿಂದ 10-43 ಘಂಟೆಯೊಳಗೆ ಸಲ್ಲುವ ಶುಭ ಕರ್ಕಾಟಕ ಲಗ್ನದಲ್ಲಿ

**ಚಿ|| ರಾ|| ಗಿರೀಶ .ಬಿ.ಎಸ್** ಪ್ರೌ.ಶಾ.ಶಿಕ್ಷಕರು
(ಶ್ರೀಮತಿ ರತ್ನಮ್ಮ ಮತ್ತು ಶ್ರೀ ಬಿ.ಟಿ. ಶ್ರೀನಿವಾಸಯ್ಯ ನವರ ಜೇಷ್ಠ ಪುತ್ರ)



**ಚಿ|| ಸೌ|| ಪುಷ್ಪಲತ .ಕೆ.ಆರ್** ಪೊಲೀಸ್ ಇಲಾಖೆ
(ಶ್ರೀಮತಿ ವೀರಮ್ಮ ಮತ್ತು ಶ್ರೀ ಕೆ .ಎಂ. ರಂಗಪ್ಪ ನವರ ಕಿರಿಯ ಪುತ್ರಿ)

ಇವರ ವಿವಾಹ ಮಹೋತ್ಸವವನ್ನು " **ಸಪ್ತಗಿರಿ ಕಲ್ಯಾಣ ಮಂಟಪ** " ದಲ್ಲಿ ನಡೆಯುವಂತೆ ಗುರು-ಹಿರಿಯರು ನಿಶ್ಚಯಿಸಿರುವುದರಿಂದ ತಾವುಗಳು ಸಕುಟುಂಬ ಸಮೇತರಾಗಿ ಆಗಮಿಸಿ ವಧೂ-ವರರನ್ನು ಆಶೀರ್ವದಿಸಬೇಕಾಗಿ ಕೋರುವ

ತಮ್ಮ ವಿಶ್ವಾಸಿಗಳು,

